CPMG / KA / BG-GPO/13/2003-2005



# ಕರ್ನಾಟಕ ರಾಜ್ಯ ಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೧೪, ೨೦೦೫ (ಚೈತ್ರ ೨೪, ಶಕ ವರ್ಷ ೧೯೨೭) | ಸಂಚಿಕೆ ೧೫ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4**

**ಸಂ:ತೋಇ:ತೋಬೆ:ಸಸಂ:ಸತೋಅ-2:117:04-05 ದಿನಾಂಕ: 24ನೇ ಮಾರ್ಚ್ 2005**

**ವಿಷಯ :** 2005-06ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಗೆ ಗೋಡಂಬಿ ಕಸಿ ಗಿಡಗಳನ್ನು ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ :** 1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.

2. ಸರ್ಕಾರದ ಆದೇಶ ಪತ್ರ ಸಂ: ಎಸಿ: ಎನ್‌ಡಿಸಿಡಿ:1530, ದಿನಾಂಕ: 7.11.00

ತೋಟಗಾರಿಕೆ ಇಲಾಖೆಯು ಅನುಷ್ಠಾನಗೊಳಿಸುವ ಕೇಂದ್ರ ಪುರಸ್ಕೃತ ಗೇರು ಅಭಿವೃದ್ಧಿ ಯೋಜನೆಯಲ್ಲಿ 2005-06ನೇ ಸಾಲಿಗೆ ರಾಜ್ಯದ ವಿವಿಧ ಜಿಲ್ಲೆಗಳಿಗೆ ಉತ್ಕೃಷ್ಟ ಗೋಡಂಬಿ ಕಸಿ ಗಿಡಗಳನ್ನು ಸರಬರಾಜು ಮಾಡಲು ಕೊಕೋ ಮತ್ತು ಗೋಡಂಬಿ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ಅವರಿಂದ ಅನುಮೋದನೆಗೊಂಡ ನರ್ಸರಿಗಳು ತಮ್ಮ ಅತೀ ಕಡಿಮೆ ದರಗಳನ್ನು ನಮೂದಿಸಿ ಮೊಹರಾದ ಟೆಂಡರ್ ಲಕೋಟೆಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ **ಗೋಡಂಬಿ ಕಸಿ ಗಿಡಗಳ ಪೂರೈಕೆಗೆ ಟೆಂಡರ್ 2005-06** ಎಂದು ನಮೂದಿಸತಕ್ಕದ್ದು. ಹೆಚ್ಚಿನ ಮಾಹಿತಿಗಾಗಿ ತೋಟಗಾರಿಕೆ ಜಂಟಿ ನಿರ್ದೇಶಕರು, (ತೋಟದ ಬೆಳೆಗಳು), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.100-00 (ರೂ. ಒಂದು ನೂರು ಮಾತ್ರ) ಗಳನ್ನು ಪಾವತಿಸಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ರೀತಿಯಲ್ಲಿ ಟೆಂಡರ್ ಸಲ್ಲಿಸಿದ್ದರೆ, ತಿರಸ್ಕರಿಸಲಾಗುವುದು.

ನೀವು ಸರಬರಾಜು ಮಾಡುವ ಗೇರು ಕಸಿ ಗಿಡಗಳ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ. 25,000-00 (ರೂ. ಇಪ್ಪತ್ತೈದು ಸಾವಿರ ಮಾತ್ರ) ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿದ ಬ್ಯಾಂಕ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ದಿನಾಂಕ: 16.04.05 ರಂದು ಮಧ್ಯಾಹ್ನ 4.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು. ಟೆಂಡರ್ ಫಾರಂನ್ನು ದಿನಾಂಕ: 11.04.05 ರಿಂದ 13.04.05 ರವರೆಗೆ ಕಛೇರಿ ವೇಳೆಯಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಹಾಗೂ ದಿನಾಂಕ: 16.04.05 ರಂದು ಮಧ್ಯಾಹ್ನ 12.00 ಗಂಟೆವರೆಗೆ ಪಡೆಯಬಹುದು.

ಟೆಂಡರ್‌ಗಳನ್ನು ದಿನಾಂಕ: 17.04.05 ರಂದು ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಹಣವನ್ನು ಹಿಂತಿರುಗಿಸಲಾಗುವುದು. ಟೆಂಡರ್ ಒಪ್ಪಿಗೆಯಾದವರ ಭದ್ರತಾ ಠೇವಣಿ ಹಣವನ್ನು ಅವರ ಸರಬರಾಜು ಪ್ರಕ್ರಿಯೆ ಪೂರ್ಣವಾದ ನಂತರ ನಿಗದಿಪಡಿಸಿದ ಪ್ರಮಾಣ ಹಾಗೂ ಗುಣಮಟ್ಟದ ಗೇರು ಕಸಿ ಗಿಡಗಳನ್ನು ಪಡೆದಿರುವ ದೃಢೀಕರಣವನ್ನು ಸಂಬಂಧಪಟ್ಟ ಅನುಷ್ಠಾನಾಧಿಕಾರಿಗಳಿಂದ ಖಾತರಿಪಡಿಸಿಕೊಂಡ ಮೇಲೆ ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರ ಹೆಸರುಗಳನ್ನು ಎಲ್ಲಾ ಜಿಲ್ಲಾ/ತಾಲ್ಲೂಕು ಅನುಷ್ಠಾನಾಧಿಕಾರಿಗಳಿಗೆ ಕಳುಹಿಸಿ ಕೊಡುವುದರಿಂದ ಅನುಮೋದಿತ ಟೆಂಡರ್‌ದಾರರು ಆಯಾ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು, (ಜಿಪಂ),/ ತಾಲ್ಲೂಕು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಿಪಂ)/ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ)ರವರಿಂದ ಬೇಡಿಕೆಗಳನ್ನು ಪಡೆದು ಸಾಗಾಣಿಕೆ ವೆಚ್ಚವನ್ನು ತಾವೆ ಭರಿಸಿಕೊಂಡು ಆಯಾ ಅನುಷ್ಠಾನಾಧಿಕಾರಿಗಳು ಸೂಚಿಸುವ ಸ್ಥಳಗಳಿಗೆ ಸರಬರಾಜು ಮಾಡಬೇಕು. ಕನಿಷ್ಠ ಟೆಂಡರ್ ದರವು ಸಾಗಾಣಿಕೆ ವೆಚ್ಚವನ್ನು ಒಳಗೊಂಡಿದ್ದು ಆಯಾ ಕ್ಷೇತ್ರಾಧಿಕಾರಿಗಳ ಸ್ಥಳಗಳಿಗೆ ಸರಬರಾಜು ಮಾಡುವುದನ್ನು ಒಳಗೊಂಡಿರತಕ್ಕದ್ದು.

**ಷರತ್ತುಗಳು:**

1. 2005-06ನೇ ಸಾಲಿನ ಮ್ಯಾಕ್ರೋಮೋಡ್ ಯೋಜನೆ, ನ್ಯಾಷನಲ್ ಹಾರ್ಟಿಕಲ್ಚರ್ ಮಿಷನ್ ಹಾಗೂ ಸಪ್ಲಿಮೆಂಟರಿ ಕ್ರಿಯಾ ಯೋಜನೆಗಳ ನಿರೀಕ್ಷಿತ ಅನುದಾನದ ಅಂದಾಜು ರೂ. 621.00 ಲಕ್ಷಗಳಿರುತ್ತದೆ. ಈ ಅನುದಾನದಲ್ಲಿ ವ್ಯತ್ಯಾಸವಾಗುವ ಸಂಭವವಿರುತ್ತದೆ.
2. 6 ಇಂಚು ಅಗಲ 9 ಇಂಚು ಉದ್ದ ಪಾಲಿಥೀನ್ ಬ್ಯಾಗ್‌ನಲ್ಲಿ ಕನಿಷ್ಠ 7-9 ಸಂಖ್ಯೆ (ರೋಗ ಕೀಟ ಭಾದೆ ರಹಿತ) ಸಮೃದ್ಧ ಎಲೆಗಳುಳ್ಳ ಉತ್ತಮ ಕಸಿ ಗಿಡಗಳನ್ನು ಸರಬರಾಜು ಮಾಡಬೇಕು.
3. ಗಿಡಗಳು ಪೆನ್ಸಿಲ್‌ನಷ್ಟು ದಪ್ಪ ಗಾತ್ರದ ಕಾಂಡ ಇದ್ದು, ಇವು 7 ಇಂಚಿನಿಂದ 9 ಇಂಚುವರೆಗೆ ಉದ್ದ ಇರಬೇಕು ಮತ್ತು ಗಿಡಗಳ ವಯಸ್ಸು ಕಸಿ ಕಟ್ಟಿದ ಮೇಲೆ ಕನಿಷ್ಠ 5 ತಿಂಗಳು ಆಗಿರಬೇಕು.
4. ಟೆಂಡರ್‌ದಾರರು ಭಾರತ ಸರ್ಕಾರದ ಗೇರು ಮತ್ತು ಕೊಕೋ ಅಭಿವೃದ್ಧಿ ನಿರ್ದೇಶನಾಲಯ, ಕೊಚ್ಚಿನ್ ಇವರಿಂದ ಅನುಮೋದನೆ ಗೊಂಡಿರಬೇಕು (ಸಂಬಂಧಿಸಿದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು).
5. ಟೆಂಡರ್ ಸಲ್ಲಿಸುವವರು ನರ್ಸರಿ ವಿಳಾಸವನ್ನು ಟೆಂಡರ್ ಫಾರಂನಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು ಹಾಗೂ ಟೆಂಡರ್‌ದಾರರು ಸ್ವತಃ ಉತ್ಪಾದಕರಾಗಿರಬೇಕು, ಹಾಗೂ ತಾಯಿ ಗಿಡಗಳನ್ನು ಹೊಂದಿರಬೇಕು.
6. ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿದ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸಬೇಕು. ಚೆಕ್ ಅಥವಾ ರಾಷ್ಟ್ರಿಯ ಉಳಿತಾಯ ಪತ್ರಗಳ ಮೂಲಕ ಸಲ್ಲಿಸಿದ್ದಲ್ಲಿ ಸ್ವೀಕರಿಸಲಾಗುವುದಿಲ್ಲ.
7. ಕನಿಷ್ಠ 1.00 ಲಕ್ಷ ಸಂಖ್ಯೆ ಉತ್ತಮ ಗೇರು ಕಸಿ ಗಿಡಗಳನ್ನು ಒದಗಿಸುವ ಸಾಮರ್ಥ್ಯವುಳ್ಳವರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. ಇಲಾಖೆಗೆ ಬೇಕಾದ ತಳಿಗಳು ಉಲ್ಲಾಳ್ 1,2,3,4, ಚಿಂತಾಮಣಿ 1, ವೆಂಗುರ್ಲ-1,4,7 ಮತ್ತು ಎನ್.ಆರ್.ಸಿ.ಸಿ. ಪುತ್ತೂರು ಇವರು ಶಿಫಾರಸ್ಸು ಮಾಡಿದ ತಳಿಗಳು.
8. ಯಶಸ್ವಿಯಾದ ಟೆಂಡರ್‌ದಾರರ ವಿಳಾಸಗಳನ್ನು ರಾಜ್ಯದ ವಿವಿಧ ಜಿಲ್ಲೆಗಳ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಹಾಗೂ ಇನ್ನಿತರ ತಾಲ್ಲೂಕು ಅಧಿಕಾರಿಗಳಿಗೆ ಕಳುಹಿಸಿ ಕೊಡಲಾಗುವುದರಿಂದ ಬೇಡಿಕೆಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದು, ಸೂಚಿಸುವ ಸ್ಥಳಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಅನುಷ್ಠಾನಾಧಿಕಾರಿಗಳು ತಿಳಿಸಿದ ದಿನಾಂಕದೊಳಗಾಗಿ ಸರಬರಾಜು ಮಾಡಲು ಸಿದ್ದರಿರಬೇಕು.
9. ಯಶಸ್ವಿಯಾದ ಯಾವುದೇ ಟೆಂಡರ್‌ದಾರರಿಗೆ ನಿರ್ದೇಶನಾಲಯದಿಂದ ನೇರವಾಗಿ ಯಾವುದೇ ಕಸಿ ಗಿಡಗಳನ್ನು ಸರಬರಾಜು ಮಾಡಲು ಬೇಡಿಕೆ ನೀಡಲಾಗುವುದಿಲ್ಲ. ಬೇಡಿಕೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು/ ತಾಲ್ಲೂಕು ಮಟ್ಟದ ಅಧಿಕಾರಿಗಳು ಮಾತ್ರ ನೀಡುವುದು. ಅನುಮೋದಿತ ಸರಬರಾಜುದಾರರಿಗೆ ಬೇಡಿಕೆಗಳನ್ನು ನೀಡುವುದು ಅಥವಾ ಬಿಡುವುದು ಆಯಾ ಜಿಲ್ಲೆಗಳ ಅನುಷ್ಠಾನಾಧಿಕಾರಿಗಳಿಗೆ ಸಂಬಂಧಿಸಿರುತ್ತದೆ. ಈ ಬಗ್ಗೆ ಯಾವುದೇ ದೂರುಗಳು ಬಂದಲ್ಲಿ ತೋಟಗಾರಿಕೆ ನಿರ್ದೇಶನಾಲಯವು ಸ್ವೀಕರಿಸುವುದಿಲ್ಲ.
10. ಟೆಂಡರ್ ಫಾರಂ ಬೆಲೆ ರೂ. 100-00 (ರೂ. ಒಂದು ನೂರು ಮಾತ್ರ) ಅನ್ನು ನೀಡಿ ನಿರ್ದೇಶನಾಲಯದಿಂದ ಪಡೆಯತಕ್ಕದ್ದು.
11. ಗೇರು ಕಸಿ ಗಿಡಗಳ ಗುಣಮಟ್ಟವನ್ನು ಪರೀಕ್ಷಿಸಿ ತೀರ್ಮಾನಿಸುವ ಸಂಪೂರ್ಣ ಜವಾಬ್ದಾರಿಯು, ತೋಟಗಾರಿಕೆ ಇಲಾಖೆಯು ರಚಿಸಿದ ಸಮಿತಿಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಹಾಗೂ ಈ ಗಿಡಗಳು ಗುಣಮಟ್ಟದಲ್ಲಿ ಕಳಪೆಯಾಗಿದ್ದಲ್ಲಿ ಅಂತಹದನ್ನು ತಿರಸ್ಕರಿಸುವ ಪೂರ್ಣ ಹಕ್ಕು ಇಲಾಖೆಗೆ ಇರುತ್ತದೆ.
12. ಅನುಮೋದಿತ ಟೆಂಡರ್‌ದಾರರು ಸರಬರಾಜು ಮಾಡುವ ಗೇರು ಕಸಿ ಗಿಡಗಳು ನಿಗದಿತ ಗುಣಮಟ್ಟದಂತಿಲ್ಲದಿದ್ದಲ್ಲಿ, ಅನುಮೋದಿತ ಟೆಂಡರ್‌ದಾರರು ಅವರ ವೆಚ್ಚದಲ್ಲಿಯೇ ನಿಗದಿತ ಗುಣಮಟ್ಟದ ಗೇರು ಕಸಿ ಗಿಡಗಳನ್ನು ಬದಲಾಯಿಸಬೇಕು.
13. ಟೆಂಡರ್ ಸಲ್ಲಿಸುವವರು ವಿಳಾಸವನ್ನು ಹಾಗೂ ಫೋನ್ ನಂಬರ್‌ನ್ನು ಟೆಂಡರ್‌ನಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.
14. ಟೆಂಡರ್‌ದಾರರು ನಮೂದಿಸುವ ದರವು ಸಾಗಾಣಿಕೆ ವೆಚ್ಚವನ್ನು ಒಳಗೊಂಡಿರತಕ್ಕದ್ದು.
15. ಟೆಂಡರ್‌ದಾರರು ನಮೂದಿಸುವ ದರವು 2005-06ನೇ ಸಾಲಿನ ಆರ್ಥಿಕ ವರ್ಷಕ್ಕೆ ಮಾರ್ಚ್ 31,2006ರ ವರೆಗೆ ಅನ್ವಯ ಆಗಿರತಕ್ಕದ್ದು.
16. ಟೆಂಡರ್‌ದಾರರು ಗಿಡಗಳನ್ನು ಸಾಗಾಣಿಕೆ ಮಾಡುವ ಸಮಯದಲ್ಲಿ ಯಾವುದೇ ಪ್ರಕೃತಿ ವಿಕೋಪದಿಂದ/ ಇತರೆ ಕಾರಣಗಳಿಂದ ಉಂಟಾಗುವ ಹಾನಿಗಳಿಗೆ ಅವರೇ ಜವಾಬ್ದಾರರು.
17. ಅನುಮೋದಿತ ಟೆಂಡರ್‌ದಾರರು ಮೇಲಿನ ಯಾವುದೇ ಷರತ್ತುಗಳನ್ನು ಪಾಲಿಸದಿದ್ದಲ್ಲಿ ಅವರ ಇ.ಎಂ.ಡಿ. ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಸಂಸ್ಥೆಯನ್ನು ಕಪ್ಪು ಪಟ್ಟಿಗೆ ಸೇರಿಸಲಾಗಿದೆ.
18. ಯಾವುದೇ ಕಾರಣ ನೀಡದೇ ಟೆಂಡರ್ ರದ್ದುಗೊಳಿಸುವ, ತಿರಸ್ಕರಿಸುವ ಹಾಗೂ ಪುರಸ್ಕರಿಸುವ ನಿರ್ಧಾರ ಹಾಗೂ ಅಂತಿಮ ತೀರ್ಪು ತೋಟಗಾರಿಕೆ ನಿರ್ದೇಶಕರವರದಾಗಿರುತ್ತದೆ.
19. ಮೇಲೆ ಹೇಳಿದ ನಿಬಂಧನೆಗಳಿಗೆ ಒಪ್ಪಿಗೆಯನ್ನು ಅನುಮೋದಿತ ಸರಬರಾಜುದಾರರು: ಕರಾರು ಒಪ್ಪಿಗೆ ಪತ್ರವನ್ನು ರೂ. 20-00 ಬೆಲೆಯ ಛಾಪಾ ಕಾಗದದ ಮೇಲೆ ಬರೆದು ಸಹಿ ಮಾಡಿಕೊಡಬೇಕು.
20. ಯಾವುದೇ ಕಾನೂನು ಪರಿಹಾರಗಳಿಗೆ ಬೆಂಗಳೂರು ವ್ಯಾಪ್ತಿಯ ಕೋರ್ಟುಗಳಿಗೆ ಸೀಮಿತವಾಗಿರುತ್ತದೆ.

ಪಿ.ಆರ್. 168 ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ನಿರ್ದೇಶನಾಲಯ, ಬೆಂಗಳೂರು.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ) ಕೋಲಾರ**

**ಟೆಂಡರ್ ಆಹ್ವಾನ ಪ್ರಕಟಣೆ**

**ಸಂ:ತೋಇ:ಹಿಸತೋನಿ:ರಾವಕೋ:ಕಾನಿ:1:221:2004-05 ದಿನಾಂಕ: 19ನೇ ಮಾರ್ಚ್ 2005**

ಈ ಮೂಲಕ ಪಾಲಿಹೌಸ್ ನಿರ್ಮಾಣಕಾರರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಜಿಲ್ಲೆಯಲ್ಲಿ ಈ ಕಛೇರಿ ಅಧೀನ ಬರುವ ವಿವಿಧ ತೋಟಗಾರಿಕೆ ಕ್ಷೇತ್ರಗಳಲ್ಲಿ ಸಸ್ಯಾಭಿವೃದ್ಧಿ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿ ಕಾರ್ಯಕ್ರಮದಡಿ 18.0 M X5.5M X3.5M ಅಳತೆಯ ಪಾಲಿ ಹೌಸ್‌ಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ಸದರಿ ಪಾಲಿ ಹೌಸ್‌ಗಳನ್ನು ಈ ಪ್ರಕಟಣೆಗೆ ಲಗತ್ತಿಸಿರುವ ತಾಂತ್ರಿಕ ವಿವರಣಾ ಪಟ್ಟಿಯಂತೆ ಮತ್ತು ಸ್ಪಷ್ಟೀಕರಣಗಳಂತೆ ವಸ್ತುಗಳನ್ನು ಬಳಸಿ ಕನಿಷ್ಟ ದರಗಳಲ್ಲಿ ನಿರ್ಮಿಸಿ ಕೊಡಬಯಸುವವರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಆಸಕ್ತಿಯಿರುವವರು ಈ ಕಛೇರಿಯಲ್ಲಿ ದಿನಾಂಕ: 13.04.2005 ರಂದು ಅಪರಾಹ್ನ 3.00 ಘಂಟೆಯೊಳಗೆ ಟೆಂಡರ್ ಫಾರಂ ಶುಲ್ಕ ರೂ.200-00 ಪಾವತಿಸಿ ಟೆಂಡರ್ ಫಾರಂ ಪಡೆದು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಲಗತ್ತಿರುವ ತಾಂತ್ರಿಕ ವಿವರಣಾ ಪಟ್ಟಿಯಲ್ಲಿನ ಅಂಶಗಳವಾರು ಕನಿಷ್ಠ ದರವನ್ನು ಸೂಚಿಸಿದ ಟೆಂಡರ್‌ನ್ನು ಮುಚ್ಚಿದ ಲಕೋಟೆಯಲ್ಲಿಟ್ಟು "ಪಾಲಿ ಹೌಸ್ ನಿರ್ಮಾಣಕ್ಕಾಗಿ ಟೆಂಡರ್" ಎಂದು ಬರೆದು ದಿನಾಂಕ: 15.04.2005 ರಂದು ಅಪರಾಹ್ನ 4.00 ಘಂಟೆಯೊಳಗೆ ಈ ಕಛೇರಿಗೆ ಖುದ್ದು ಅಥವಾ ಮುದ್ದಾಂ ತಲುಪಿಸಲು ಕೋರಿದೆ.

**18.0 M X5.5M X3.5M ಅಳತೆಯ ಪಾಲಿ ಹೌಸ್ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿಬಂಧನೆಗಳು**

1. ಕನಿಷ್ಠ ದರ ಸೂಚಿಸಿ ಭರ್ತಿಮಾಡಿದ ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂನೊಂದಿಗೆ ರೂ.5,000-00 ಭದ್ರತಾ ಠೇವಣಿಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರಾಜ್ಯವಲಯ ಕೋಲಾರ ರವರ ಹೆಸರಿಗೆ ಪಡೆದ ಡಿ.ಡಿ.ಯನ್ನು ಲಗತ್ತಿಸಿರಬೇಕು. ಈ ಮೊತ್ತದ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ. ಲಗತ್ತಿಸಿಲ್ಲದ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

2. ಕನಿಷ್ಠ ಟೆಂಡರ್‌ನ ಮೊತ್ತದಲ್ಲಿ ಎಲ್ಲಾ ವಿಧವಾದ ತೆರಿಗೆಗಳು, ಸಾಗಾಣಿಕೆ ವೆಚ್ಚಗಳು, ಮತ್ತು ಅಳವಡಿಕೆಯ ವೆಚ್ಚಗಳು ಸೇರಿರತಕ್ಕದ್ದು. ಲಗತ್ತಿರುವ ತಾಂತ್ರಿಕ ವಿವರಣಾ ಪಟ್ಟಿ (ಷೆಡ್ಯೂಲ್-ಎ) ಯಲ್ಲಿನ ಅಂಶಗಳಂತೆ ಗುಣಮಟ್ಟದ ಸಾಮಗ್ರಿಗಳನ್ನು ಉಪಯೋಗಿಸಿ ಕ್ಷೇತ್ರದಲ್ಲಿನ ಅಥವಾ ಈ ಕೆಳಸಹಿದಾರರು ಸೇರಿದಂತೆ ಇಲಾಖಾ ಮೇಲಾಧಿಕಾರಿಗಳು ನೀಡುವ ಸಲಹೆ ಸೂಚನೆ ಮೇರೆಗೆ ಪಾಲಿಹೌಸ್ ನಿರ್ಮಾಣ ಮಾಡಬೇಕು.

3. ಪಾಲಿ ಹೌಸ್ ನಿರ್ಮಾಣ ಸಂದರ್ಭದಲ್ಲಿ ಕ್ಷೇತ್ರದಲ್ಲಿನ ಇಲಾಖಾ ಸಸ್ಯ ಸಂಪತ್ತಿಗೆ ಅಥವಾ ಇಲಾಖಾ ಇನ್ನಿತರ ಆಸ್ತಿಗೆ ಯಾವುದೇ ಧಕ್ಕೆಯಾಗದಂತೆ ಟೆಂಡರ್‌ದಾರರು ಎಚ್ಚರ ವಹಿಸಬೇಕು ಒಂದು ವೇಳೆ ಇಲಾಖಾ ಆಸ್ತಿಗೆ ಟೆಂಡರ್‌ದಾರರಿಂದ ನಷ್ಟ ಆದಲ್ಲಿ, ಆದ ನಷ್ಟವನ್ನು ಟೆಂಡರ್‌ದಾರರಿಂದ ವಸೂಲಿ ಮಾಡುವ ಅಧಿಕಾರವನ್ನು ಈ ಕಛೇರಿ ಹೊಂದಿರುತ್ತದೆ.

4. ಯಾವುದೇ ಕಾರಣಕ್ಕೂ ನಿಗದಿತ ಅವಧಿ ಮೀರಿ ಬರುವ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ, ಅಲ್ಲದೆ ಅಂಚೆ ವಿಳಂಬಕ್ಕೆ ಈ ಕಛೇರಿ ಜವಾಬ್ದಾರಿಯಲ್ಲ.

5. ಸ್ವೀಕೃತ ಸೀಲ್ಡ್ ಟೆಂಡರ್ ಕವರ್‌ಗಳನ್ನು ದಿನಾಂಕ: 15.04.2005 ರಂದು ಅಪರಾಹ್ನ 5.00 ಗಂಟೆಗೆ ಲಭ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ಈ ಕೆಳಸಹಿ ಮಾಡಿರುವವರಿಂದ ತೆರೆಯಲಾಗುವುದು ಕನಿಷ್ಠ ಟೆಂಡರ್‌ನ್ನು ಒಪ್ಪುವುದು ಅಥವಾ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಕಾಯ್ದಿರಿಸಿಕೊಂಡಿರುತ್ತಾರೆ.

6. ಕನಿಷ್ಠ ಟೆಂಡರ್‌ರಾಗಿ ಅಂಗೀಕೃತಗೊಳಿಸುವ ಟೆಂಡರ್‌ದಾರರು ಕೆಲಸದ ಆದೇಶ ನೀಡಿದ ದಿನದಿಂದ 15 ದಿವಸದೊಳಗೆ ಪಾಲಿಹೌಸ್ ನಿರ್ಮಾಣ ಮಾಡಿಕೊಡಬೇಕು. ಪಾಲಿ ಹೌಸ್‌ನ್ನು ಉತ್ತಮವಾಗಿ ಟೆಂಡರ್ ನಿಯಮಗಳಂತೆ ಮತ್ತು ಲಗತ್ತಿರುವ ತಾಂತ್ರಿಕ ಅಂಶಗಳು ಮತ್ತು ಗುಣಮಟ್ಟದ ಮೆಟಿರಿಯಲ್ಸ್ ಉಪಯೋಗಿಸಿ ನಿರ್ಮಿಸಿದ ನಂತರ ಸ್ಥಳ ವೀಕ್ಷಣೆ ಮಾಡಿ ದೃಢೀಕರಿಸಿದ ನಂತರವಷ್ಟೆ ಪಾವತಿ ಏರ್ಪಾಡು ಮಾಡಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

**ಷೆಡ್ಯೂಲ್-ಎ**

**ತಾಂತ್ರಿಕ ವಿವರಣಾ ಪಟ್ಟಿ: DETAILED SCOPE OF WORK**

**1. FOUNDATION DETAILS:**

The Grouting for the polyhouse structure will be 2" dia 'A' Class ISI Mark G I pipe with base plate at the bottom fixed 2 feet inside the Ground with solid Cement Concrete The $1^1/_2$ Feet Parpet Wall to be constructed on all the four sides of the structure hollow blocks/earthen table mould bricks.

**2. STRUCTUREAL DETAILS:**

For the Construction of Polyhouse, the complete structural materials used will be ISI Grade G.I.Pipes, The materials to be used are as follows.

a) 1 1/2" Dia G.I. Pipe ISI Mark 'B' Class for Poles/Columns vertical supporting Pipe to the structure and this pipe will be fitted inside the 2" dia G.I Pipe.

b) 1"Dia G.I.Pipe ISI Mark 'A' Class for trusses and Inside support as shown in the sketch.

c) 3/4 "Dia G.I. Pipe ISI Mark 'A' Class for purlins connecting one truss to another truss at a distance of 4 feet apart as shown in the sketch.

d) For fixing the U.V. Stabilized Polythylene Sheet on either side of the Trusses, Channel/Angle of a $1^1/_4$" tobe provided and then Sheet to be fixed with wooden (Silver oak) beeding.

e) The Complete structure to be covered with IPCL Grade Natural White (Transparent) U.V. Stabilized LDPE sheet of 200 Micron (800 Gauge) thickness.

f) On either side of the POLY-HOUSE structure Rambo net (U. V. Stabilized) to be fixed for circulation of air.

g) 2 Nos. M.S. Door of size 3'x7' to be provided one each at the front and back of the structure.

**APPROXIMATE MATERIAL SPECIFICATIONS FOR 18MX5.5MX3.5M POLY HOUSE:**

| Sl. No. | Particulars | Approximate Quantity. |
|---|---|---|
| 1. | 2" Dia G.I. Pipe ISI mark 'A' Class for grouting | 12 mtrs |
| 2. | $1^1/_2$" Dia G.I. Pipe ISI Mark 'B' Class for poles/ Vertical Columns of the structure fixed inside the grouting. | 45 mtrs |
| 3. | 1" Dis G.I. Pipe ISI Mark 'A' Class for trusses and inside support as shown in the sketch | 180 mtrs |
| 4. | $^3/_4$" Dia G.I. Pipe ISI Mark 'A' Class for purlins to connect one truss to another truss. | 95 mtrs |
| 5. | $1\ ^1/_4$" 3 mm thick Channel/ Angle for fixing the LDPE film. | 150 Kgs |

| Sl. No. | Particulars | Approximate Quantity. |
|---|---|---|
| 6. | U. V. Stabilized 200 Micron thick LDPE sheet IPCL | 58 Kgs |
| 7. | 2" thick Foam fixed on top arch of truss. | 1 No. |
| 8. | Insect proof/Rambnet for side ventilation. | 20 mtrs |
| 9. | Beeding(wooden-silver oak) for fixing the sheet to the tructure. | 2-Bundles |
| 10. | consumables, concrete materials, wall materials and etc. | |

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,

ಪಿ.ಆರ್. 156 (ರಾಜ್ಯವಲಯ) ಕೋಲಾರ.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ) ಕೋಲಾರ**

**ಟೆಂಡರ್ ಆಹ್ವಾನ ಪ್ರಕಟಣೆ**

**ಸಂ:ತೋಇ:ಹಿಸತೋನಿ:ರಾವಕೋ:ಕಾನಿ:1:219:2004-05 ದಿನಾಂಕ: 19ನೇ ಮಾರ್ಚ್ 2005**

ಈ ಮೂಲಕ ಶೇಡ್ ನೆಟ್ ಪೆಂಡಾಲ್ ನಿರ್ಮಾಣಕಾರರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಜಿಲ್ಲೆಯಲ್ಲಿ ಈ ಕಛೇರಿ ಅಧೀನ ಬರುವ ವಿವಿಧ ತೋಟಗಾರಿಕೆ ಕ್ಷೇತ್ರಗಳಲ್ಲಿ ಸಸ್ಯಾಭಿವೃದ್ಧಿ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿ ಕಾರ್ಯಕ್ರಮದಡಿ 18.0 M X12.5M X2.25M ಅಳತೆಯ ಶೇಡ್ ನೆಟ್ ಪೆಂಡಾಲ್‌ಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ಸದರಿ ಶೇಡ್ ನೆಟ್ ಪೆಂಡಾಲ್‌ಗಳನ್ನು ಈ ಪ್ರಕಟಣೆಗೆ ಲಗತ್ತಿಸಿರುವ ತಾಂತ್ರಿಕ ವಿವರಣಾ ಪಟ್ಟಿಯಂತೆ ಮತ್ತು ಸ್ಪಷ್ಟೀಕರಣಗಳಂತೆ ವಸ್ತುಗಳನ್ನು ಬಳಸಿ ಕನಿಷ್ಟ ದರಗಳಲ್ಲಿ ನಿರ್ಮಿಸಿ ಕೊಡಬಯಸುವವರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯಿರುವವರು ಈ ಕಛೇರಿಯಲ್ಲಿ ದಿನಾಂಕ: 08.04.2005 ರಂದು ಅಪರಾಹ್ನ 3.00 ಘಂಟೆಯೊಳಗೆ ಟೆಂಡರ್ ಫಾರಂ ಶುಲ್ಕ ರೂ.200-00 ಪಾವತಿಸಿ ಟೆಂಡರ್ ಫಾರಂ ಪಡೆದು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಲಗತ್ತಿರುವ ತಾಂತ್ರಿಕ ವಿವರಣಾ ಪಟ್ಟಿಯಲ್ಲಿನ ಅಂಶಗಳವಾರು ಕನಿಷ್ಟ ದರವನ್ನು ಸೂಚಿಸಿದ ಟೆಂಡರ್‌ನ್ನು ಮುಚ್ಚಿದ ಲಕೋಟೆಯಲ್ಲಿಟ್ಟು "ಶೇಡ್ ನೆಟ್ ಪೆಂಡಾಲ್ ನಿರ್ಮಾಣಕ್ಕಾಗಿ ಟೆಂಡರ್" ಎಂದು ಬರೆದು ದಿನಾಂಕ: 11.04.2005 ರಂದು ಅಪರಾಹ್ನ 4.00 ಘಂಟೆಯೊಳಗೆ ಈ ಕಛೇರಿಗೆ ಖುದ್ದು ಅಥವಾ ಮುದ್ದಾಂ ತಲುಪಿಸಲು ಕೋರಿದೆ.

**18.0 M X12.5M X2.25M ಅಳತೆಯ ಶೇಡ್ ನೆಟ್ ಪೆಂಡಾಲ್ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿಬಂಧನೆಗಳು**

1. ಕನಿಷ್ಠ ದರ ಸೂಚಿಸಿ ಭರ್ತಿಮಾಡಿದ ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂನೊಂದಿಗೆ ರೂ.5,000-00 ಭದ್ರತಾ ಠೇವಣಿಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರಾಜ್ಯವಲಯ ಕೋಲಾರ ರವರ ಹೆಸರಿಗೆ ಪಡೆದ ಡಿ.ಡಿ.ಯನ್ನು ಲಗತ್ತಿಸಿರಬೇಕು. ಈ ಮೊತ್ತದ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ. ಲಗತ್ತಿಸಿಲ್ಲದ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

2. ಕನಿಷ್ಠ ಟೆಂಡರ್‌ನ ಮೊತ್ತದಲ್ಲಿ ಎಲ್ಲಾ ವಿಧವಾದ ತೆರಿಗೆಗಳು, ಸಾಗಾಣಿಕೆ ವೆಚ್ಚಗಳು, ಮತ್ತು ಅಳವಡಿಕೆಯ ವೆಚ್ಚಗಳು ಸೇರಿರತಕ್ಕದ್ದು. ಲಗತ್ತಿರುವ ತಾಂತ್ರಿಕ ವಿವರಣಾ ಪಟ್ಟಿ (ಷೆಡ್ಯೂಲ್ಡ್-ಎ) ಯಲ್ಲಿನ ಅಂಶಗಳಂತೆ ಗುಣಮಟ್ಟದ ಸಾಮಾಗ್ರಿಗಳನ್ನು ಉಪಯೋಗಿಸಿ ಕ್ಷೇತ್ರದಲ್ಲಿನ ಅಥವಾ ಈ ಕೆಳಸಹಿದಾರರು ಸೇರಿದಂತೆ ಇಲಾಖಾ ಮೇಲಾಧಿಕಾರಿಗಳು ನೀಡುವ ಸಲಹೆ ಸೂಚನೆ ಮೇರೆಗೆ ಪಾಲಿಹೌಸ್ ನಿರ್ಮಾಣ ಮಾಡಬೇಕು.

3. ಶೇಡ್ ನೆಟ್ ಪೆಂಡಾಲ್ ನಿರ್ಮಾಣ ಸಂದರ್ಭದಲ್ಲಿ ಕ್ಷೇತ್ರದಲ್ಲಿನ ಇಲಾಖಾ ಸಸ್ಯ ಸಂಪತ್ತಿಗೆ ಅಥವಾ ಇಲಾಖಾ ಇನ್ನಿತರ ಆಸ್ತಿಗೆ ಯಾವುದೇ ಧಕ್ಕೆಯಾಗದಂತೆ ಟೆಂಡರ್‌ದಾರರು ಎಚ್ಚರ ವಹಿಸಬೇಕು ಒಂದು ವೇಳೆ ಇಲಾಖಾ ಆಸ್ತಿಗೆ ಟೆಂಡರ್‌ದಾರರಿಂದ ನಷ್ಠ ಆದಲ್ಲಿ, ಆದ ನಷ್ಠವನ್ನು ಟೆಂಡರ್‌ದಾರರಿಂದ ವಸೂಲಿ ಮಾಡುವ ಅಧಿಕಾರವನ್ನು ಈ ಕಛೇರಿ ಹೊಂದಿರುತ್ತದೆ.

4. ಯಾವುದೇ ಕಾರಣಕ್ಕೂ ನಿಗದಿತ ಅವಧಿ ಮೀರಿ ಬರುವ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ, ಅಲ್ಲದೆ ಅಂಚೆ ವಿಳಂಬಕ್ಕೆ ಈ ಕಛೇರಿ ಜವಾಬ್ದಾರಿಯಲ್ಲ.

5. ಸ್ವೀಕೃತ ಸೀಲ್ಡ್ ಟೆಂಡರ್ ಕವರ್‌ಗಳನ್ನು ದಿನಾಂಕ: 11.04.2005 ರಂದು ಅಪರಾಹ್ನ 5.00 ಗಂಟೆಗೆ ಲಭ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ಈ ಕೆಳಸಹಿ ಮಾಡಿರುವವರಿಂದ ತೆರೆಯಲಾಗುವುದು. ಕನಿಷ್ಠ ಟೆಂಡರ್‌ನ್ನು ಒಪ್ಪುವುದು ಅಥವಾ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಕಾಯ್ದಿರಿಸಿಕೊಂಡಿರುತ್ತಾರೆ.

6. ಕನಿಷ್ಠ ಟೆಂಡರ್‌ರಾಗಿ ಅಂಗೀಕೃತಗೊಳಿಸುವ ಟೆಂಡರ್‌ದಾರರು ಕೆಲಸದ ಆದೇಶ ನೀಡಿದ ದಿನದಿಂದ 15 ದಿವಸದೊಳಗೆ ಶೇಡ್ ನೆಟ್ ಪೆಂಡಾಲ್ ನಿರ್ಮಾಣ ಮಾಡಿಕೊಡಬೇಕು. ಶೇಡ್‌ನೆಟ್ ಪೆಂಡಾಲ್‌ನ್ನು ಉತ್ತಮವಾಗಿ ಟೆಂಡರ್ ನಿಯಮಗಳಂತೆ ಮತ್ತು ಲಗತ್ತಿರುವ ತಾಂತ್ರಿಕ ಅಂಶಗಳು ಮತ್ತು ಗುಣಮಟ್ಟದ ಮೆಟಿರಿಯಲ್ಸ್ ಉಪಯೋಗಿಸಿ ನಿರ್ಮಿಸಿದ ನಂತರ ಸ್ಥಳ ವೀಕ್ಷಣೆ ಮಾಡಿ ದೃಢೀಕರಿಸಿದ ನಂತರವಷ್ಟೆ ಪಾವತಿ ಏರ್ಪಾಡು ಮಾಡಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

**ಷೆಡ್ಯೂಲ್-ಎ**

**ತಾಂತ್ರಿಕ ವಿವರಣಾ ಪಟ್ಟಿ: DETAILED SCOPE OF WORK**

**1. FOUNDATION DETAILS:**

The Grouting for the shade-Net pendal structure should be 2" Dia "A" class ISI Mark G I pipe with base plate at the bottom to be fixed 2 feet inside the Ground with solid Cement Concrete i.e., 1:2:4 cement concrete mixture.

**2. STRUCTUREAL DETAILS:**

For the Construction of shade-Net Pendal the complete structural materials to be used will be ISI Grade G.I.Pipes, The materials to be used should be follows.

a) 1 1/2" Dia G.I. Pipe ISI Mark 'B' Class for Poles/Columns and Top Frame of the pendal structure.

b) 1"Dia G.I.Pipe ISI Mark 'A' Class Should be provided as support at the intersection of the $1^1/_2$" Dia G.I.Pipe Frame.

c) 50% Shade-net of superior quality should be fixed to the top frame of the structure with 1 feet skirting on all the four sides of the frame as shown in the sketch.

d) G. I. Wire of 14 Gauge thick should be drawn both horizontally and vertically at a distance of 4 feet apart over the G.I. Pipe Frame.

Note: the Distance between one pole to Another Pole is 3.6 MX4.1M.

**APPROXIMATE MATERIAL SPECIFICATIONS FOR SHADE-NET PENDAL OF AREA: 18MX12.5MX 2.25M**

| Sl. No. | Particulars | Approximate Quantity. |
|---|---|---|
| 1. | 2" Dia G.I. Pipe ISI Mark 'A' Class | 16 mtr |
| 2. | $1^1/_2$" Dia G.I. Pipe ISI Mark 'B' Class for poles and top Frame. | 215 mtrs |
| 3. | 1" Dia G.I. Pipe ISI Mark 'A' Class for support at intersection. | 20 mtrs |
| 4. | 50% Shade-net superior quality. | 250 sq.mtr |
| 5. | G. I. Wire 14 Gauge thickness | 30 Kgs |
| 6. | Cement concrete materials and etc | |

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

ಪಿ.ಆರ್. 157

## ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಕಡವು ನಿರೀಕ್ಷಕರ ಕಛೇರಿ, ಶಿವಮೊಗ್ಗ ವಲಯ, ದ್ವಾರಕನಾಥ ಕಲಾಮಂದಿರ ಕಟ್ಟಡ, ಸಾಗರ

## ಕಡವು ನಡೆಸುವ ಮರು ಹರಾಜು ಪ್ರಕಟಣೆ

**ಸಂಖ್ಯೆ: ಒಜಸಾ: ಒಪಿಎ: ಕ್ರಸಂ:7:2004-05 ದಿನಾಂಕ: 18ನೇ ಮಾರ್ಚ್ 2005**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ಕಡವುಗಳನ್ನು 2005-06ನೇ ಸಾಲಿಗೆ ತಮ್ಮ ಸ್ವಂತ ನಾವೆಯನ್ನು ಇಟ್ಟುಕೊಂಡು ಕಡವು ನಡೆಸುವ ಹಕ್ಕನ್ನು ಕೆಳಗೆ ನಮೂದಿಸಿದ ದಿನಾಂಕ: ಸಮಯ ಹಾಗೂ ಸ್ಥಳದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ಈ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು, ಕೆಳಗೆ ಕಾಣಿಸಿದ ಸ್ಥಳದಲ್ಲಿ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

| ಕ್ರ. ಸಂ. | ಕಡವಿನ ಹೆಸರು | ತಾಲ್ಲೂಕು ಜಿಲ್ಲೆ | ಲಿಲಾವು ಮಾರಾಟದ ಸ್ಥಳ ದಿನಾಂಕ, ವೇಳೆ | ಕಡವಿನ ಗುತ್ತಿಗೆ ಅವಧಿ | ಕಡವಿನಲ್ಲಿ ಪ್ರಯಾಣಿಕರಿಂದ ಆಕರಿಸುವ ಹಾಸಲುದರ | ಲಿಲಾವುಸಮಯ ದಲ್ಲಿ ಇಡಬೇಕಾದ ಭದ್ರತಾ ಠೇವಣಿ | ಪ್ರಾರಂಭಿಕ ಸರ್ಕಾರಿ ಸವಾಲು ಮೊತ್ತ |
|---|---|---|---|---|---|---|---|
| 1 | ಮಂಡಗದ್ದೆ ಮುತ್ತಿನಕೊಪ್ಪ | ತೀರ್ಥಹಳ್ಳಿ ಶಿವಮೊಗ್ಗ ಜಿಲ್ಲೆ | ಕಡವು ನಿರೀಕ್ಷಕರ ಕಚೇರಿ ದ್ವಾರಕನಾಥ ಕಲಾ ಮಂದಿರ ಕಟ್ಟಡ ಸಾಗರ ದಿನಾಂಕ: 11.4.2005ರ ಪೂರ್ವಾಹ್ನ 11.ಗಂಟೆಗೆ | 1.4.05 ರಿಂದ 31.03.06 ರವರೆಗೆ | 1.00 | 100.00 | 5000.00 |
| 2 | ತೂದೂರು ಮಂಡವಳ್ಳಿ | ತೀರ್ಥಹಳ್ಳಿ ಶಿವಮೊಗ್ಗ ಜಿಲ್ಲೆ | ಕಡವು ನಿರೀಕ್ಷಕರ ಕಚೇರಿ ದ್ವಾರಕನಾಥ ಕಲಾ ಮಂದಿರ ಸಾಗರ ದಿನಾಂಕ: 11.4.2005ರ ಮಧ್ಯಾಹ್ನ 12.ಗಂಟೆಗೆ | 1.04.05 ರಿಂದ 31.03.06 ರವರೆಗೆ | 1.00 | 100.00 | 610.00 |

**ಕಡವು ಹರಾಜಿನ ಷರತ್ತುಗಳು:**

1. ಕಡವಿನ ಸೇವೆಗೆ ಬಳಸುವ ನಾವೆಯ ಸಾಮರ್ಥ್ಯಕ್ಕನುಗುಣವಾಗಿ ಪ್ರಯಾಣಿಕರ ಜೀವವಿಮೆ ಮಾಡಿಸತಕ್ಕದ್ದು.
2. ಕಡವಿಗೆ ಇಲಾಖೆಯಿಂದ ನಾವೆ ಒದಗಿಸಿದಲ್ಲಿ ಇಲಾಖಾ ನಾವೆ ಬಾಡಿಗೆ ಪ್ರತಿ ದಿನಕ್ಕೆ ರೂ. 20.00 ರಂತೆ ಇಲಾಖೆಗೆ ಗುತ್ತಿಗೆದಾರರು ಸಂದಾಯ ಮಾಡಬೇಕಾಗುತ್ತದೆ. ಅಲ್ಲದೇ ಇಲಾಖಾ ನಾವೆಯ ಭದ್ರತೆ ಬಗ್ಗೆ ರೂ.50,000-00 ಬ್ಯಾಂಕ್ ಗ್ಯಾರಂಟಿಯನ್ನು ಗುತ್ತಿಗೆ ಅವಧಿ ಮುಗಿಯುವವರೆಗೆ ಕೊಡತಕ್ಕದ್ದು.
3. ಕಡವು ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸ್ಪರ್ಧಿಗಳು ಹರಾಜು ನಡೆಸುವ ಅಧಿಕಾರಿಯರೊಡನೆ ಹರಾಜು ಪ್ರಾರಂಭಿಸುವ ಮೊದಲು ಪ್ರಕಟಣೆಯಲ್ಲಿ ತಿಳಿಸಿರುವ ಹಣವನ್ನು ಠೇವಣಿಯಾಗಿ ಇಡತಕ್ಕದ್ದು.
4. ಹರಾಜಿನಲ್ಲಿ ಗೆದ್ದವರ ಠೇವಣಿಯನ್ನು ಅವರಿಂದ ಪಾವತಿಸಲು ಇರುವ ಸವಾಲು ಮೊತ್ತದ ಹಣಕ್ಕೆ ವಜಾ ಮಾಡಲಾಗುವುದು ಉಳಿದವರಿಗೆ ಹರಾಜು ಮುಗಿದ ಕೂಡಲೇ ಹಣ ವಾಪಾಸ್ಸು ಮಾಡಲಾಗುವುದು.
5. ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಗರಿಷ್ಠ ಮೊತ್ತದ ಸವಾಲುದಾರನು ಸಂಪೂರ್ಣ ಹಣವನ್ನು ಏಕಗಂಟಿನಲ್ಲಿ ಕೂಡಲೇ ಪಾವತಿ ಮಾಡಲು ಸಮರ್ಥರಿರಬೇಕು.
6. ಬಂದರು ಮತ್ತು ಒಳನಾಡು ಇಲಾಖಾ ನಿರ್ದೇಶಕರ ವಿವೇಚನೆಗೊಳಪಟ್ಟು ಕಂತುಗಳನ್ನು ನೀಡಿದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ನೀಡತಕ್ಕದ್ದು.

7. ಬಹಿರಂಗ ಹರಾಜಿನಲ್ಲಿ ಸವಾಲಿನಲ್ಲಿ ಬೇಡಿದ ಗರಿಷ್ಠ ಮೊತ್ತದ ಶೇ.10 ರಷ್ಟನ್ನು ಕನಿಷ್ಠ ರೂ.50.00ನ್ನು ಭದ್ರತಾ ಠೇವಣಿಯಾಗಿ ಪ್ರತ್ಯೇಕವಾಗಿ ಒಂದೇ ಗಟಿನಲ್ಲಿ ಲಿಲಾವಿನ ಸ್ಥಳದಲ್ಲಿ ಪಾವತಿ ಮಾಡತಕ್ಕದ್ದು.
8. ಹರಾಜಿನಲ್ಲಿ ಸಮಾಧಾನಕರ ಬೇಡಿಕೆ ಬಂದಲ್ಲಿ ಕಡವು ನಡೆಸುವ ಹಕ್ಕಿನ ಅವಧಿಯನ್ನು ಒಂದು ವರ್ಷದ ಬದಲಿಗೆ ಎರಡು ವರ್ಷಕ್ಕೆ ಸಹ ಲಿಲಾವು ಸ್ಥಳದಲ್ಲಿಯೇ ನಿರ್ಧರಿಸಲಾಗುವುದು.
9. ಇಂತಹ ಸಂದರ್ಭದಲ್ಲಿ 2 ವರ್ಷದ ಬಿಡ್ಡಿಯ ಮೊತ್ತವನ್ನು ಒಂದೇ ಗಂಟಿನಲ್ಲಿ ಅಥವಾ ಸೂಕ್ತ ಬ್ಯಾಂಕ್ ಗ್ಯಾರಂಟಿ ನೀಡಿದ್ದಲ್ಲಿ ಎರಡನೇ ವರ್ಷದ ಹಣವನ್ನು ಪ್ರತ್ಯೇಕ ಕಂತಿನಲ್ಲಿ ತುಂಬಲು ಅವಕಾಶ ನೀಡಲಾಗುವುದು. ಇದು ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೆ ಒಳಪಟ್ಟಿದೆ.
10. ಹರಾಜಿನಲ್ಲಿ ಗೆದ್ದವರು ಹರಾಜಿನ ಹಣವನ್ನು ತಕ್ಷಣ ಪಾವತಿ ಮಾಡತಕ್ಕದ್ದು. ಅಥವಾ ಬ್ಯಾಂಕ್ ಗ್ಯಾರಂಟಿ ಪತ್ರ ನೀಡತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಅವರು ಕಟ್ಟಿದ ಠೇವಣಿಯನ್ನು ಕಳೆದುಕೊಳ್ಳುವರು ಅಂತಹ ತಪ್ಪಿತಸ್ಥ ಸವಾಲುಗಾರರು ಪುನಃ ಸವಾಲಿನಲ್ಲಿ ಭಾಗವಹಿಸುವ ಹಕ್ಕನ್ನು ಕಳೆದುಕೊಳ್ಳುತ್ತಾನೆ.
11. ಹರಾಜಿನಲ್ಲಿ ಗೆದ್ದವರು ರೂ. 15.00 ಸ್ಟ್ಯಾಂಪ್ ಕಾಗದದ ಮೇಲೆ ಅವರ ಖರ್ಚಿನಲ್ಲೇ ಕರಾರು ಪತ್ರವನ್ನು ಬರೆದುಕೊಟ್ಟ ನಂತರ ಹಣವನ್ನು ವಹಿಸಿಕೊಡಲಾಗುವುದು. ಅಥವಾ ಕಡವು ನಡೆಸಲು ಅನುಮತಿ ನೀಡಲಾಗುವುದು.
12. ಕಡವು ಸೇವೆಗೆ ಉಪಯೋಗಿಸುವ ದೋಣಿಗಳನ್ನು ಕಡವು ಸೇವೆಗೆ ತೊಡಗಿಸುವ ಮೊದಲು ಕಡವು ನಿರೀಕ್ಷಕರ ಅಧಿಕಾರಿಗಳ ತಪಾಸಣೆಗೆ ಒಳಪಡಿಸಿ ಸರ್ಕಾರದ ನಿಯಮಾನುಸಾರ ಲೈಸೆನ್ಸ್ ಪಡೆಯಬೇಕು.
13. ನಾವೆಗೆ ಅಗತ್ಯವಾದ ಜೀವ ರಕ್ಷಕ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
14. ಕಡವಿನಲ್ಲಿ ವಸೂಲು ಮಾಡುವ ಹಾಸಲು ದರಗಳ ಸೂಚನಾ ಫಲಕಗಳನ್ನು ಕಡವು ನಡೆಸುವ ಸ್ಥಳದಲ್ಲಿ ಬಹಿರಂಗವಾಗಿ ಪ್ರಕಟಿಸತಕ್ಕದ್ದು.
15. ಕಡವು ಸರ್ಕಾರದ ಕರಾರು ಒಪ್ಪಂದದ ನಿಯಮಗಳಿಗೆ ಅನುಸಾರವಾಗಿ ನಡೆಸತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಹರಾಜಿನಲ್ಲಿ ಗೆದ್ದವರು ಪಡೆದ ಹಕ್ಕನ್ನು ಮತ್ತು ಕಟ್ಟಿದ ಹಣವನ್ನು ಕಳೆದುಕೊಳ್ಳುವರು ಇದರಿಂದಾಗಿ ಸರ್ಕಾರಕ್ಕೆ ಆಗುವ ನಷ್ಟಕ್ಕೆ ಅವರೇ ಜವಾಬ್ದಾರರಾಗಿರುತ್ತಾರೆ.
16. ಗುತ್ತಿಗೆದಾರರು ಪ್ರತಿ ತಿಂಗಳು ಕಡವಿನಲ್ಲಿ ಸಾಗಿಸಲಾದ ಪ್ರಯಾಣಿಕರ ಸರಕುಗಳ ಅಂಕಿಅಂಶಗಳನ್ನು ತಪ್ಪದೇ ಕಡವು ನಿರೀಕ್ಷಕರಿಗೆ ಒಪ್ಪಿಸತಕ್ಕದ್ದು.
17. ಒಂದು ವೇಳೆ ಮೇಲಿನ ಷರತ್ತುಗಳನ್ನು ಪಾಲಿಸುವಲ್ಲಿ ಸ್ಪರ್ಧಿಗಳು ಅಸಮರ್ಥರಾದಲ್ಲಿ ಲಿಲಾವನ್ನು ಕೂಡಲೇ ರದ್ದುಪಡಿಸಿ, ಪುನಃ ಲಿಲಾವು ಮಾಡಲಾಗುವುದು, ಇದರಿಂದ ಸರ್ಕಾರಕ್ಕೆ ನಷ್ಟವಾದಲ್ಲಿ ಅವರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.
18. ಹರಾಜು ಮಾರಾಟವನ್ನು ಖಾಯಂಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಕರ್ನಾಟಕ ರಾಜ್ಯದ ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರಿಗೆ ಸೇರಿರುತ್ತದೆ.

ಎನ್. ಎಂ. ನಾರಾಯಣಸ್ವಾಮಿ
ಕಡವು ನಿರೀಕ್ಷಕರು, ಶಿವಮೊಗ್ಗ ವಲಯ, ಸಾಗರ.

ಪಿ.ಆರ್. 158

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು

## "ತೋಟಗಾರಿಕೆ ಇಲಾಖೆಗೆ ಹೂವಿನ ಗಿಡ, ಗೆಡ್ಡೆ ಹಾಗೂ ಸಸಿಗಳನ್ನು ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ"

**ಸಂ:ತೋಇ:ಉತೋಪ:ಹಿಸತೋನಿ:ಪುವಿ:ಸತೋಅ:1:2005-06 ದಿನಾಂಕ: 15ನೇ ಮಾರ್ಚ್ 2005**

2005-06ನೇ ವಾಣಿಜ್ಯ ಪುಷ್ಪಾಭಿವೃದ್ಧಿ ಯೋಜನೆಯ ಪ್ರದೇಶ ವಿಸ್ತರಣೆ ಕಾರ್ಯಕ್ರಮದಲ್ಲಿ ವಿವಿಧ ಜಿಲ್ಲೆಗಳ ಫಲಾನುಭವಿಗಳಿಗೆ ವಾಣಿಜ್ಯ ಹೂಗಿಡಗಳ ಗೆಡ್ಡೆ, ಕಣ್ಣು ಹಾಕಿದ ಗುಲಾಬಿ ಗಿಡಗಳು, ಮಲ್ಲಿಗೆ ಸಸಿಗಳು ಹಾಗೂ ಅಂಗಾಂಶ ಕೃಷಿ ಅಂಥೂರಿಯಂ, ಆರ್ಕಿಡ್, ಜರ್ಬೆರಾ ಮತ್ತು ಇತರೆ ಹೂಗಿಡಗಳನ್ನು ಸರಬರಾಜು ಮಾಡಲು ಇಚ್ಚಿಸುವ ಸಂಸ್ಥೆ, ಅಥವಾ ವ್ಯಕ್ತಿಗಳಿಂದ ಶೀಲು ಮಾಡಿದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ: 25.4.05 ಟೆಂಡರ್ ಫಾರಂ ಬೆಲೆ ರೂ.100.00 ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 25.04.05 ಸಂಜೆ 5.00 ಗಂಟೆ. ಟೆಂಡರ್‌ಅನ್ನು ದಿನಾಂಕ: 26.4.05 ರಂದು ಬೆಳಿಗೆ 11.00 ಗಂಟೆಗೆ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಪುಷ್ಪಾಭಿವೃದ್ಧಿ ವಿಭಾಗ, ಲಾಲ್‌ಬಾಗ್, ಬೆಂಗಳೂರು ರವರನ್ನು ಸಂಪರ್ಕಿಸಬಹುದು.

ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು.

## AGRICULTURE AND HORTICULTURE DEPARTMENT

## Directorate of Horticulture, Lalbagh, Bangalore-4

## TENDER NOTIFICATION

**No. DH/JDH/PGF/SADH/FLORI/AHO/1/2005-06 Dated: 24th March 2005**

Sealed tenders are invited for supply of Budded Roses (Var: Mullu hybrid, Sofia lauren and Happiness) Curcuma rizomes, Bird of Paradise plants, Carnation tip cuttings, Jasmine rooted cutting, Gladiolus and corms, hardened tissue culture plants of Anthurium, Orchid and Gerbera plants to the beneficiaries of various districts in Commercial Floriculture scheme under area expansion programme during 2005-2006 from the Nurserymen and Plant Suppliers. The terms and conditions may be obtained from the office of the Senior Assistant Director of Horticulture, Floriculture Section, Lalbagh, Bangalore, during office hours.

Application Fee for each tender form is Rs.100/-, the sealed tenders prescribed on the cover as "TENDER FOR SUPPLY OF COMMERCIAL FLOWER PLANTS AND SEEDS" may be sent either through post or in person so as to reach the Senior Assistant Director of Horticulture, Floriculture section, Lalbagh, Bangalore, on or before 5.00 P.M. of 25.04.05.

Tender will be opened on 26.4.05 at 11.00 A.M. in mini meeting hall of the Directorate of Horticulture, Lalbagh, Bangalore.

PR-159 DIRECTOR OF HORTICULTURE.

**ತೋಟಗಾರಿಕೆ ಉಪನಿರ್ದೇಶಕರ ಕಛೇರಿ 'ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ:ಕಉ:ವಿನಿ-2:80:04-05 ದಿನಾಂಕ: 24ನೇ ಮಾರ್ಚ್ 2005**

**ವಿಷಯ :** ಅಲಂಕಾರಿಕಾ ಗಿಡಗಳನ್ನು ಖರೀದಿಸುವ ಬಗ್ಗೆ ಟೆಂಡರ್

ಸರ್ಕಾರದ ಮುಖ್ಯ ಕಾರ್ಯದರ್ಶಿ, ನಾಮನಿರ್ದೇಶಿತ ವಸತಿ ಗೃಹ ನಿರ್ಮಾಣದ ಕಾಮಗಾರಿ ಲ್ಯಾಂಡ್ ಸ್ಕೇಪ್ ಕಾಮಗಾರಿಗೆ ಈ ಕೆಳಗೆ ತಿಳಿಸಿದ ವಿವಿಧ ಅಲಂಕಾರಿಕಾ ಗಿಡಗಳು ಬೇಕಾಗಿರುತ್ತವೆ. ಈ ಬಗ್ಗೆ ಅಧಿಕೃತ ಸರಬರಾಜುದಾರರು ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಗಿಡಗಳನ್ನು ಸರಬರಾಜು ಮಾಡಲು ಇಚ್ಛಿಸುವವರು ಈ ಕೆಳಗೆ ಸೂಚಿಸಿದ ವಿವರಗಳ ರೀತಿ ನಿಮ್ಮ ಟೆಂಡರ್‌ಗಳನ್ನು ದಿನಾಂಕ: 29.4.2005ರ ಒಳಗೆ ಈ ಕಛೇರಿಗೆ ನೀಡಲು ಕೋರುತ್ತೇನೆ. ಹೆಚ್ಚಿನ ವಿಷಯಗಳನ್ನು ಈ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

| ಕ್ರ.ಸಂ. | ವಿವರಗಳು | ಪ್ರಮಾಣ |
|---|---|---|
| 1. | Acalypha macfeena | 1 No |
| 2. | Aglonema crispum | 1 No |
| 3. | Allamanda dwarf green | 1 No |
| 4. | Alpina purpurata | 1 No |
| 5. | Alpina rubra | 1 No |
| 6. | Alpina seciosa variegata | 1 No |
| 7. | Areca leutescens palm | 1 No |
| 8. | Asparagus sprengeri | 1 No |
| 9. | Beloperone guttata Yellow | 1 No |
| 10. | Coroyline mahatma | 1 No |
| 11. | Cuphea hyssopifolia white | 1 No |
| 12. | Ficus panda | 1 No |
| 13. | Galphinia glauca | 1 No |
| 14. | Graptophyllum pictum Tricolour | 1 No |
| 15. | Heliconia metallica | 1 No |
| 16. | Hymenocalis species (Spider lilly) | 1 No |
| 17. | Ixora coccinae | 1 No |
| 18. | Jasmine creepers | 1 No |
| 19. | Justicia aurea | 1 No |
| 20. | Lantana sellowiana Alba | 1 No |
| 21. | Lillies-All colours | 1 No |
| 22. | Nephrolepsis goldeana | 1 No |
| 23. | Nerium dwarf peach | 1 No |
| 24. | Opipogan variegata | 1 No |
| 25. | Pennissetum rueppeli | 1 No |
| 26. | Philodendron xanadu | 1 No |
| 27. | Philodendron selloum | 1 No |
| 28. | Polysecias fruticosa Aurem | 1 No |
| 29. | Pseudoeranthemum reticulatum | 1 No |
| 30. | Quisqualis indica | 1 No |
| 31. | Raphis palm | 1 No |
| 32. | Schefflera variegata | 1 No |
| 33. | Spathyphyllum | 1 No |
| 34. | Tabernaemontana variegata | 1 No |
| | **GROUND COVER PLANTS** | |
| 1. | Jacquemontia dwarf | Sqm |
| | **TREES** | |
| 1 | Areca catechu | 1 No |
| 2 | Ficus benjamina Prestige | 1 No |
| | **LAWN** | |
| 1 | Phasphyllum grass (Shade grass) | Sqm |
| 2 | Bermuda grass | Sqm |

**ಷರತ್ತು ಮತ್ತು ನಿಬಂಧನೆಗಳು:**

1. ನಿಗದಿಯಾದ ಸಮಯದೊಳಗೆ ನಿಮ್ಮ ಟೆಂಡರ್‌ಗಳನ್ನು ಈ ಕಛೇರಿಗೆ ತಲುಪಿಸಬೇಕು. ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.
2. ಆದೇಶ ಕೊಟ್ಟ ಮೂರು ದಿನಗಳೊಳಗೆ ಉತ್ತಮ ಗುಣಮಟ್ಟದ ಗಿಡಗಳನ್ನು ಸಂಬಂಧಪಟ್ಟ ವಿಭಾಗಕ್ಕೆ ಸರಬರಾಜು ಮಾಡಬೇಕು.
3. ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಪೂರ್ಣ ಅಧಿಕಾರ ತೋಟಗಾರಿಕೆ ನಿರ್ದೇಶಕರು ಲಾಲ್‌ಬಾಗ್ ಬೆಂಗಳೂರು ರವರು ಪಡೆದಿರುತ್ತಾರೆ.
4. ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.
5. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 27.4.2005 ರಿಂದ 28.04.2005 ರವರೆಗೆ ರೂ. 500.00 ಪಾವತಿಸಿ ಪಡೆಯಬಹುದು.
6. ಟೆಂಡರ್‌ಗಳನ್ನು ಸಲ್ಲಿಸುವ ಕೊನೆಯ ದಿನಾಂಕ: 29.4.2005 ರಂದು 4.00 ಗಂಟೆವರೆಗೆ ಹಾಗೂ ಅಂದೇ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
7. ಇ.ಎಂ.ಡಿ. ರೂ. 4000-00 ಗಳ ಡಿ.ಡಿ.ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್ ಲಾಲ್‌ಬಾಗ್, ಬೆಂಗಳೂರು ಇವರಿಗೆ ಪಾವತಿಸುವಂತೆ ಇರಬೇಕು.
8. ಟೆಂಡರ್‌ದಾರರು ಕಳೆದ ಸಾಲಿನ ಆದಾಯ ಕ್ಲಿಯರೆನ್ಸ್ ಪತ್ರವನ್ನು ಲಗತ್ತಿಸಬೇಕು.
9. ಹೆಚ್ಚಿನ ವಿಷಯಗಳನ್ನು ಈ ಕಛೇರಿ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪನಿರ್ದೇಶಕರು, ಕಬ್ಬನ್
ಪಿ.ಆರ್.161 ಉದ್ಯಾನವನ, ಬೆಂಗಳೂರು.

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಉನಿ:ಕಉ:ವಿನಿ2:ಬಿಜಿಟಿ:87 2004-05 ದಿನಾಂಕ: 30ನೇ ಮಾರ್ಚ್ 2005**

ಕಬ್ಬನ್ ಉದ್ಯಾನವನದ ವಿವಿಧ ವಿಭಾಗಗಳಿಗೆ ಮಾಸ್‌ನ್ನು ಖರೀದಿಸಬೇಕಾಗಿರುತ್ತದೆ. ಸರಬರಾಜು ಮಾಡಲು ಇಚ್ಛಿಸುವವರು ಅಧಿಕೃತ ಗುತ್ತಿಗೆದಾರರು ಸಂಸ್ಥೆಗಳು: ಸರಬರಾಜುದಾರರು ಈ ಕೆಳಗೆ ತಿಳಿಸಿದ ವಿವರಗಳ ರೀತಿ ದಿನಾಂಕ: 4.5.2005 ರಂದು ಸಂಜೆ 4.00 ಗಂಟೆಯೊಳಗೆ ಮೊಹರಾದ ಟೆಂಡರ್‌ಗಳನ್ನು ಈ ಕಛೇರಿಗೆ ತಲುಪಿಸಲು ಕೋರಿದೆ.

| ವಿವರಗಳು | ಪ್ರಮಾಣ |
|---|---|
| ಉತ್ತಮ ಗುಣ ಮಟ್ಟವುಳ್ಳ ಮಾಸ (Sphagno mass) | ಪ್ರತಿ ಕೆ.ಜಿ.ಗೆ |

**ಷರತ್ತು ಮತ್ತು ನಿಬಂಧನೆಗಳು:**

1. ಟೆಂಡರ್ ಫಾರಂ ಜೊತೆಯಲ್ಲಿ ರೂ. 3000-00 ಗಳ ಇ.ಎಂ.ಡಿ.ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದು ಸಲ್ಲಿಸಬೇಕು ಡಿ.ಡಿ. ಇಲ್ಲದಿದ್ದ ಪಕ್ಷದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಫಾರಂಗಳನ್ನು ಸೀಲ್ ಮಾಡಿರಬೇಕು. ಹಾಗೂ 2005-06ನೇ ಸಾಲಿನಲ್ಲಿ ಮಾಸ್ ಸರಬರಾಜಿಗೆ ಟೆಂಡರ್ ಎಂದು ನಮೂದಿಸಿರಬೇಕು.
3. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 2.5.2005 ರಿಂದ 3.5.2005 ವರೆಗೆ ರೂ.500-00 ಗಳನ್ನು ಪಾವತಿಸಿ ಪಡೆಯಬಹುದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಗೆ ಸಲ್ಲಿಸುವ ಕಡೆಯ ದಿನಾಂಕ: 4.5.2005 ರಂದು 4.00 ಗಂಟೆಯವರೆಗೆ 4.00 ಗಂಟೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಹಾಗೂ ಅಂದೇ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಟೆಂಡರ್‌ದಾರರು ಕಳೆದ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಟೆಂಡರ್‌ನೊಂದಿಗೆ ಲಗತ್ತಿಸಬೇಕು.
6. ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ತೆರಿಗೆಗಳನ್ನು ಕಟಾಯಿಸಲಾಗುವುದು.
7. ಟೆಂಡರ್‌ಗಳನ್ನು ಪುರಸ್ಕರಿಸುವ ಮತ್ತು ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್ ಬೆಂಗಳೂರು ರವರದೇ ಅಂತಿಮ ತೀರ್ಮಾನವಾಗಿರುತ್ತದೆ.
8. ಹೆಚ್ಚಿನ ಮಾಹಿತಿ ಮತ್ತು ವಿಷಯಗಳಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿಯಲ್ಲಿ ಪಡೆಯಬಹುದು.

ಪಿ.ಆರ್.162 ತೋಟಗಾರಿಕೆ ಉಪನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

**FORM-IV**
**(See Rule 12)**
**NOTICE**

It is hereby notified that the undersigned has changed her name from **SHIVANAGAMMA CHANNAVEERAGOUDA PATIL** to **VIJAYALAXMI SADASHIVA YADEHALLI**

PD-47 **VIJAYALAXMI SADASHIVA YADEHALLI**

**ನಮೂನೆ-1**
**(9ನೇ ನಿಯಮ ನೋಡಿ)**
**ಕಾರಾಗೃಹ ಇಲಾಖೆ**
**ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ನಂ.4, ಶೇಷಾದ್ರಿ ರಸ್ತೆ, ಬೆಂಗಳೂರು-560 009**
**ಅಧಿಸೂಚನೆ**

**ಶ್ರೀ ಮಲ್ಲಪ್ಪ ಶಿವಲಿಂಗಭಂಗಿ,** ವೀಕ್ಷಕರು, ಕಾರಾಗೃಹ ಇಲಾಖೆ, ಉಪಮಹಾನಿರೀಕ್ಷಕರ ಕಛೇರಿ, ಕೇಂದ್ರ ಕಾರಾಗೃಹ, ಬೆಂಗಳೂರು ಇಲ್ಲಿ ಕೆಲಸ ಮಾಡುತ್ತಿರುವ ಇವರ ಹೆಸರನ್ನು **ಶ್ರೀ ಮಲ್ಲಪ್ಪ ಶಿವಲಿಂಗ ದೇಸಾಯಿ** ಎಂದು ಬದಲಾವಣೆ ಮಾಡಲು ಅನುಮತಿ ನೀಡಿದೆ.

ಪೊಲೀಸ್ ಮಹಾನಿರ್ದೇಶಕರು, ಮತ್ತು ಕಾರಾಗೃಹಗಳ
ಮಹಾನಿರೀಕ್ಷಕರು.

ಪಿಡಿ-48

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**
**ಟೆಂಡರ್ ಪ್ರಕಟಣೆ**
**ಸಂಖ್ಯೆ: ತೋಉನಿ:ಕಉ:ವಿನಿ-2:ಬಿಜಿಟಿ:100 2004-05 ದಿನಾಂಕ: 30ನೇ ಮಾರ್ಚ್ 2005**

ಕಬ್ಬನ್ ಉದ್ಯಾನವನಕ್ಕೆ ವಿವಿಧ ತಳಿಯ ಅಲಂಕಾರಿಕ ಗಿಡಗಳನ್ನು ಖರೀದಿಸಬೇಕಾಗಿರುತ್ತದೆ. ಸರಬರಾಜು ಮಾಡಲು ಇಚ್ಛಿಸುವ ಅಧಿಕೃತ ಸರಬರಾಜುದಾರರು, ನರ್ಸರಿಗಳು ಈ ಕೆಳಗೆ ಕಾಣಿಸಿದ ಅಲಂಕಾರಿಕ ಗಿಡಗಳ ವಿವರದ ರೀತಿ ನಿಮ್ಮ ಟೆಂಡರ್‌ಗಳನ್ನು ದಿನಾಂಕ: 30.4.2005ರ ಒಳಗೆ ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ

**ವಿವಿಧ ತಳಿಯ ಅಲಂಕಾರಿಕ ಗಿಡಗಳು**

| Sl. No. | Different types of Creepers | Quantity |
|---|---|---|
| 1. | Rinkospermum jasminoides | Each |
| 2. | Lonicera japanica (Red) | Each |
| 3. | Climatis gowriana | Each |
| 4. | Conemorpha macrophylla | Each |
| 5. | Tristalatia australis | Each |
| 6. | Tecoma jasminoids | Each |
| 7. | Tecoma variegata | Each |
| 8. | Stigmophylum lingulatum | Each |
| 9. | Thunbergia coccinia | Each |
| 10. | Ipomia bonamax | Each |
| 11. | Stigmophylum ciliatum | Each |
| 12. | Solandra nitida | Each |
| | **Different types of Shrubs** | |
| 13. | Anthurium (New varieties) | Each |
| 14. | Mussaenda (New varieties) | Each |
| 15. | Cassia yellow (New varieties) | Each |
| 16. | Buddlea | Each |
| 17. | Valujada | Each |
| 18. | Gardenia jasminiodes | Each |
| 19. | Calliandra (Red) | Each |
| 20. | Rose creeper | Each |
| 21. | Ternera | Each |
| 22. | Clerodendron bangai | Each |
| 23. | Jasmimine kadamba | Each |
| 24. | Bauhinia monondra | Each |
| 25. | Canna dwarf | Each |
| 26. | Poincetia (Red, Yellow and White) | Each |
| 27. | Strabilanthus | Each |
| 28. | Stachistarpata | Each |
| 29. | Jacobina new | Each |
| 30. | Clerodendron newtons | Each |
| 31. | Andisia | Each |
| 32. | Lantana new variety | Each |
| 33. | Hibiscus laformae | Each |
| 34. | Rain wordshria | Each |
| 35. | Bougainvilla new varieties | Each |
| 36. | Megakipasama erythrophylla | Each |

| Sl. No. | Different types of Creepers | Quantity |
|---|---|---|
| 37. | Hemelia petans | Each |
| 38. | Jasminum all varieties | Each |
| 39. | Lagestromea indica | Each |
| 40. | Erythrina cristaballi | Each |

**ಷರತ್ತು ಮತ್ತು ನಿಬಂಧನೆಗಳು:**

1. ಟೆಂಡರ್ ಫಾರಂ ಜೊತೆಯಲ್ಲಿ ರೂ. 5000-00 ಗಳ ಇ.ಎಂ.ಡಿ. ಯನ್ನು ಯಾವುದಾದರು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿದ್ದ ಪಕ್ಷದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಫಾರಂಗಳು ಭರ್ತಿ ಮಾಡಿರಬೇಕು ಹಾಗೂ 2004-05ನೇ ಸಾಲಿಗೆ ಕಬ್ಬನ್ ಉದ್ಯಾನವನಕ್ಕೆ ಅಲಂಕಾರಿಕ ಗಿಡಗಳನ್ನು ಖರೀದಿಸಲು ಎಂದಿರಬೇಕು.
3. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 28.4.2005 ರಿಂದ 29.4.2005 ವರೆಗೆ ರೂ.500.00 ಪಾವತಿಸಿ ಪಡೆಯಬಹುದು.
4. ಟೆಂಡರ್ ಫಾರಂಗಳನ್ನು ಈ ಕಚೇರಿಗೆ ಸಲ್ಲಿಸುವ ಕಡೆಯ ದಿನಾಂಕ: 30.04.2005 ರಂದು 4.00 ಗಂಟೆಯವರೆಗೆ, 4.00 ಗಂಟೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂದೇ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್ ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಟೆಂಡರ್‌ದಾರರು ಕಳೆದ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಟೆಂಡರ್ ನೊಂದಿಗೆ ಲಗತ್ತಿಸಿರಬೇಕು.
6. ಅನ್ವಯವಾಗುವ ತೆರಿಗೆಗಳನ್ನು ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು.
7. ಟೆಂಡರ್‌ದಾರರು ಯಾವುದೇ ಪೂರ್ವ ಷರತ್ತುಗಳನ್ನು ವಿಧಿಸುವಂತಿಲ್ಲ.
8. ಟೆಂಡರ್‌ಗಳನ್ನು ಪುರಸ್ಕರಿಸುವ ಹಾಗೂ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರದೇ ಅಂತಿಮ ತೀರ್ಮಾನವಾಗಿರುತ್ತದೆ.
9. ಹೆಚ್ಚಿನ ಮಾಹಿತಿ ಮತ್ತು ವಿಷಯಗಳಿಗೆ ತೋಟಗಾರಿಕೆ ಉಪನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪನಿರ್ದೇಶಕರು, ಕಬ್ಬನ್ ಉದ್ಯಾನವನ,
ಬೆಂಗಳೂರು.

ಪಿ.ಆರ್.163

**ಪೊಲೀಸ್ ಇಲಾಖೆ**

**ಕಮಾಂಡೆಂಟ್‌ರವರು ಕೆಎಸ್‌ಆರ್‌ಪಿ, 1ನೇ ಪಡೆರವರ ಕಛೇರಿ ನಂ.60 ರಿಚ್ಮಂಡ್ ರಸ್ತೆ, ಬೆಂಗಳೂರು-25**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಸಿಬ್ಬಂದಿ (1)/115/2004-05, ದಿನಾಂಕ: 1ನೇ ಏಪ್ರಿಲ್ 2005**

**ವಿಷಯ :** ಕೆ. ಎಸ್.ಆರ್.ಪಿ. 1ನೇ ಪಡೆಯಲ್ಲಿ ಎಸ್.ಸಿ/ಎಸ್.ಟಿ. ಗಳ ಹಿಂಬಾಕಿ ಪೇದೆ ಹುದ್ದೆಗಳಿಗೆ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :** ಈ ಕಛೇರಿಯ ಅಧಿಸೂಚನೆಯ ಪತ್ರದ ಸಂಖ್ಯೆ: ಸಿಬ್ಬಂದಿ (1)/115/2004-05 ದಿನಾಂಕ: 1.2.2005.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಅಧಿಸೂಚನೆಯಂತೆ ಈ ಘಟಕದಲ್ಲಿ ಖಾಲಿ ಇರುವ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳಿಗೆ ಮೀಸಲಿರಿಸಿರುವ 12 ಹಿಂಬಾಕಿ ಪೇದೆ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಅಭ್ಯರ್ಥಿಗಳ ಗರಿಷ್ಠ ವಯೋಮಿತಿಯನ್ನು 40 ವರ್ಷ ಬದಲಾಗಿ 25 ವರ್ಷವೆಂದು ಆಕಸ್ಮಿಕವಾಗಿ ನಮೂದಿಸಲಾಗಿರುತ್ತದೆ. ಈ ಹಿಂಬಾಕಿ ಹುದ್ದೆಗಳಿಗೆ ಗರಿಷ್ಠ ವಯೋಮಿತಿ ವಯಸ್ಸು 40 ವರ್ಷ ಆಗಿರುತ್ತದೆ. ವಯೋಮಿತಿ 26 ವರ್ಷಗಳಿಂದ 40 ವರ್ಷದೊಳಗೆ ಇರುವ ಈ ಹಿಂದೆ ಇದೇ ಹುದ್ದೆಗಳಿಗಾಗಿ ಅರ್ಜಿಸಲ್ಲಿಸದಿರುವ ಅರ್ಹ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ದಿನಾಂಕ: 08.04.2005ರ ಸಾಯಂಕಾಲ 5.00 ಘಂಟೆಯೊಳಗೆ ಕಮಾಂಡೆಂಟ್‌ರವರ ಕಛೇರಿ 1ನೇ ಪಡೆ ಕೆ.ಎಸ್.ಆರ್.ಪಿ. ಬೆಂಗಳೂರು-25 ಇಲ್ಲಿಗೆ ಸಲ್ಲಿಸತಕ್ಕದ್ದು. ಒಂದು ಲಕೋಟೆಯಲ್ಲಿ (ಎನ್ವಲಪ್) ನಿಮ್ಮ ಮನೆಯ ಅಂಚೆ ವಿಳಾಸವನ್ನು ಬರೆದು ಅದರ ಮೇಲೆ ರೂಪಾಯಿ 6ರ ಪೋಸ್ಟಲ್ ಸ್ಟಾಂಪ್‌ನ್ನು ಅಂಟಿಸಿ ಅರ್ಜಿಯೊಂದಿಗೆ ಲಗತ್ತಿಸುವುದು. ಉಲ್ಲೇಖದ ಅನುಗುಣವಾಗಿ ಈ ಹಿಂದೆ ಈ ಹುದ್ದೆಗಳಿಗಾಗಿ ಅರ್ಜಿಗಳನ್ನು ಸಲ್ಲಿಸಿದ್ದ ಅಭ್ಯರ್ಥಿಗಳು ಪುನಃ ಅರ್ಜಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಈ ಹಿಂದೆ ಪ್ರಕಟಿಸಲಾದ ಷರತ್ತುಗಳು ಇಲ್ಲಿಯೂ ಸಹಾ ಅನ್ವಯವಾಗುತ್ತದೆ.

ಕಮಾಂಡೆಂಟ್
1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

ಪಿ.ಆರ್.165

**ಪೊಲೀಸ್ ಇಲಾಖೆ**

**ಕಮಾಂಡೆಂಟ್‌ರವರ ಕಛೇರಿ,**

**ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 3ನೇ ಪಡೆ, ಕೋರಮಂಗಲ, ಬೆಂಗಳೂರು-34**

**ಅಧಿಸೂಚನೆ ಸಂ: ಸಿಬ್ಬಂದಿ-1/54/2003-04 ದಿನಾಂಕ: 2ನೇ ಏಪ್ರಿಲ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್/13/ಎಸ್‌ಬಿಸಿ/2001 ದಿನಾಂಕ: 21.11.2001 ಮತ್ತು 1.6.2002 ರನ್ವಯ ಹಾಗೂ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಷರತ್ತು) ನಿಯಮ 1974ರ ಅಡಿಯಲ್ಲಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ 3ನೇ ಪಡೆ, ಕೋರಮಂಗಲ, ಬೆಂಗಳೂರು-34 ಈ ಘಟಕದಲ್ಲಿ ಗುರುತಿಸಲಾಗಿರುವ ನೇರ ನೇಮಕಾತಿಯಲ್ಲಿ ಬಾಕಿ ಇರುವ (ಬ್ಯಾಕ್‌ಲಾಗ್) ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳನ್ನು ಅರ್ಹ ಪುರುಷ ಅಭ್ಯರ್ಥಿಗಳಿಂದ ತುಂಬಲು ಅರ್ಜಿ ಆಹ್ವಾನಿಸಲಾಗಿದೆ.

| | | |
|---|---|---|
| 1. | ಹುದ್ದೆಯ ವಿವರ | ಪೊಲೀಸ್ ಕಾನ್ಸ್ಟೇಬಲ್,<br>ಪರಿಶಿಷ್ಟ ಜಾತಿ-9 ಹುದ್ದೆಗಳು- (1 ಹುದ್ದೆ ಮಾಜಿ ಸೈನಿಕರಿಗೆ ಮೀಸಲು)<br>ಪರಿಶಿಷ್ಟ ಪಂಗಡ-2 ಹುದ್ದೆಗಳು |
| 2. | ವಿದ್ಯಾರ್ಹತೆ | ಕನಿಷ್ಠ 4ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. |
| 3. | ದೇಹದಾರ್ಢ್ಯತೆ | ಎತ್ತರ ಕನಿಷ್ಠ 168 ಸೆಂ.ಮೀ. ಇರಬೇಕು ಎದೆ ಸುತ್ತಳತೆ 81 ಸೆಂ.ಮೀ. ಇದ್ದು ವಿಸ್ತಾರಗೊಂಡಾಗ ಕನಿಷ್ಠ 86 ಸೆಂ.ಮೀ.ಗಳಿಗೆ ಕಡಿಮೆ ಇಲ್ಲದಂತೆ ಹೊಂದಿರಬೇಕು. ಇತರೆ ಸಾಮರ್ಥ್ಯ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕು. |
| 4. | ವಯೋಮಿತಿ | ಈ ಅರ್ಜಿಯನ್ನು ಸಲ್ಲಿಸಲು ನಿಗದಿಗೊಳಿಸಿದ ಅಂತಿಮ ದಿನಕ್ಕೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಮತ್ತು ಆ ದಿನಾಂಕಕ್ಕೆ 40 ವರ್ಷಗಳು ಮೀರಿರಬಾರದು |
| 5. | ವೇತನ ಶ್ರೇಣಿ | 3000-75-3450-100-4450-125-5450 |
| 6. | ತರಬೇತಿ | ನೇಮಕಗೊಂಡ ಅಭ್ಯರ್ಥಿಗಳು ಪೊಲೀಸ್ ತರಬೇತಿ ಶಾಲೆಗಳಲ್ಲಿ 12 ತಿಂಗಳು ಮೂಲ ತರಬೇತಿಯನ್ನು ಪಡೆಯಬೇಕು. ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು. |
| 7. | ಖಾಯಂ ಪೂರ್ವ ಅವಧಿ | ತರಬೇತಿಯ ಅವಧಿಯೂ ಸೇರಿದಂತೆ 2 ವರ್ಷಗಳಾಗಿರುವುದು. |

1) ಅಭ್ಯರ್ಥಿಗಳು ಅರ್ಜಿಯನ್ನು ನಮೂನೆ (ಅನುಬಂಧ)ನ್ನು ಎ-4 ಸೈಜ್‌ನ ಖಾಲಿ ಹಾಳೆಯ ಮೇಲೆ ಅರ್ಜಿ ಬೆರಳಚ್ಚು ಮಾಡಿಸಿದ ಅಥವಾ ಮುದ್ರಿಸಿದ ನಮೂನೆಯಲ್ಲಿ ಸ್ಪಷ್ಟವಾಗಿ ತುಂಬಿರತಕ್ಕದ್ದು.

2) ಲಗತ್ತುಗಳು: ಒಂದು ಲಕೋಟೆ 7"x3" (Envelope)ಯಲ್ಲಿ ನಿಮ್ಮ ಅಂಚೆ ವಿಳಾಸವನ್ನು ಬರೆದು ಅದರ ಮೇಲೆ ರೂ.6.00 ರ ಪೋಸ್ಟಲ್ ಸ್ಟಾಂಪ್‌ನ್ನು ಅಂಟಿಸಿ ಅರ್ಜಿಗೆ ಲಗತ್ತಿಸುವುದು. ಅರ್ಜಿಯನ್ನು ಸಲ್ಲಿಸುವಾಗ ಯಾವುದೇ ಶುಲ್ಕವನ್ನು ಪಾವತಿಸ ಬೇಕಾಗಿರುವುದಿಲ್ಲ. ಅರ್ಜಿಯೊಂದಿಗೆ ಈ ಕೆಳಕಂಡ ದಾಖಲಾತಿಗಳೊಂದಿಗೆ ಸಲ್ಲಿಸತಕ್ಕದ್ದು.

   1. ದೃಢೀಕರಿಸಿದ ಜಾತಿ ಪ್ರಮಾಣಪತ್ರದ ಪ್ರತಿ.
   2. ಜನ್ಮ ದಿನಾಂಕಕ್ಕೆ ಮತ್ತು ವಿದ್ಯಾರ್ಹತೆಗೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ
   3. ಇತ್ತೀಚಿನ ಪಾಸ್ ಪೋರ್ಟ್ ಅಳತೆಯ 2 ಭಾವಚಿತ್ರಗಳು.
   4. ಇಬ್ಬರು ಗಣ್ಯವ್ಯಕ್ತಿಗಳಿಂದ ಪಡೆದ ಗುಣ ಮತ್ತು ನಡತೆಯ ಪ್ರಮಾಣಪತ್ರಗಳು.

5) ಭರ್ತಿ ಮಾಡಿದ ಅರ್ಜಿಗಳನ್ನು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರು-34 ಈ ವಿಳಾಸಕ್ಕೆ ಬರೆದು ಲಕೋಟೆಯ ಮೇಲೆ "ಪರಿಶಿಷ್ಟ ಜಾತಿ- ಪರಿಶಿಷ್ಟ ಪಂಗಡ ಬ್ಯಾಕ್‌ಲಾಗ್ ಹುದ್ದೆಗಾಗಿ ಅರ್ಜಿ" ಎಂಬ ಮೇಲ್ಬರವಣಿಗೆಯೊಂದಿಗೆ ದಿನಾಂಕ: 16.04.2005 ರಂದು ಸಂಜೆ 5.30 ರೊಳಗೆ ತಲುಪುವಂತೆ ಕಳುಹಿಸುವುದು. ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸದೇ ಅಂತಹ ಅರ್ಜಿಗಳನ್ನು ತಿರಸ್ಕೃತ ಅರ್ಜಿಗಳೆಂದು ಪರಿಗಣಿಸಲಾಗುವುದು.

ಕಮಾಂಡೆಂಟ್, 3ನೇ ಪಡೆ ಕೆಎಸ್‌ಆರ್‌ಪಿ, ಕೋರಮಂಗಲ,
ಬೆಂಗಳೂರು-34

## ಅನುಬಂಧ

## ಅರ್ಜಿನಮೂನೆ

## ಕೆ.ಎಸ್.ಆರ್.ಪಿ., ಪೊಲೀಸ್ ಕಾನ್ಸ್ಟೇಬಲ್ ಪರಿಶಿಷ್ಟ ಜಾತಿ-ಪರಿಶಿಷ್ಟ ಪಂಗಡ ಬ್ಯಾಕ್‌ಲಾಗ್ ಹುದ್ದೆಗಾಗಿ ಅರ್ಜಿ

ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿರಬೇಕು (ಪತ್ರಾಂಕಿತ ಅಧಿಕಾರಿಗಳ ಸಹಿಯೊಂದಿಗೆ ದೃಢೀಕರಿಸಿರಬೇಕು)

ಗೆ,

ನೇಮಕಾತಿ ಪ್ರಾಧಿಕಾರಿ ಹಾಗೂ ಕಮಾಂಡೆಂಟ್,
3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ
ಬೆಂಗಳೂರು-34.

1. ಪೂರ್ಣ ಹೆಸರು :
2. ತಂದೆಯ ಹೆಸರು :
3. ಜನ್ಮ ದಿನಾಂಕ :
4. ವಿದ್ಯಾರ್ಹತೆ :
5. ಜಾತಿ/ ಪಂಗಡ :
6. ರಾಷ್ಟ್ರೀಯತೆ :
7. ಅಂಚೆ ವಿಳಾಸ :
8. ಖಾಯಂ ವಿಳಾಸ :

### ಅಭ್ಯರ್ಥಿಯ ಘೋಷಣೆ:

ಮೇಲೆ ಹೇಳಿದ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯು, ನೇಮಕಾತಿಗೆ ಮುಂಚೆ ಅಥವಾ ತರುವಾಯ ಸುಳ್ಳು ಅಥವಾ ತಪ್ಪೆಂದು ಕಂಡುಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ

ಪತ್ತೆಯಾದ ಸಂದರ್ಭದಲ್ಲಿ ನೇಮಕಾತಿ ಪ್ರಾಧಿಕಾರಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆ ಎಂದು ನನಗೆ ತಿಳಿದಿರುತ್ತದೆ. ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿ ಘೋಷಿಸುತ್ತೇನೆ.

ಅಭ್ಯರ್ಥಿಯ ಸಹಿ

ಕಮಾಂಡೆಂಟ್, 3ನೇ ಪಡೆ, ಕೆಎಸ್‌ಆರ್‌ಪಿ, ಕೋರಮಂಗಲ,

ಪಿ.ಆರ್.166 ಬೆಂಗಳೂರು-34

**DEPARTMENT OF HORTICULTURE**
**Directorate of Horticulture, Lalbagh, Bangalore-4**
**TENDER NOTIFICATION**
**No. DH/PC&PP/AHO-1/141/04-05 dated: 31st March 2005**

Sealed Tenders are invited from the nurseries approved by the Directorate of Cocoa and Cashew Development, Government of India, Cochin for supply of Cocoa $F_1$hybrid plants and Cocoa Grafts to the implementing officers of various districts under the Central Sector Scheme for the Development of Cocoa during 2005-06 to be implemented by the Department of Horticulture. The terms and conditions may be had from the Directorate of Horticulture, Lalbagh, Bangalore during office hours.

Application fee for each tender form is Rs. 100/- (Rupees One Hundred only). The sealed tender superscribed on the cover as "TENDER FOR SUPPLY OF COCOA F1 HYBRID PLANTS/ COCOA GRAFTS-2005-06" in separate covers may be sent either through post or in person so as to reach the undersigned on or before 16.05.05 at 4.00 P.M. Tender will be opened on 17.05.05 at 12.00 P.M., in the premises of the Directorate of Horticulture, Lalbagh, Bangalore.

PR-167 DIRECTOR OF HORTICULTURE.

**DEPARTMENT OF HORTICULTURE**
**Directorate of Horticulture, Lalbagh, Bangalore-4**
**TENDER NOTIFICATION**
**No. DH/PC&PP/AHO-2/115/04-05 dated: 28th March 2005**

Sealed Tenders are invited by the Department of Horticulture, Government of Karnataka for the supply of vermicompost and Neem Cake under the Central Sector Scheme for Integrated Development of Spices, Integrated Farming in Coconut Holdings Scheme and Coconut Technology Mission Scheme to be implemented in various districts during 2005-06, from the genuine manufacturers. The terms and conditions may be had from the Directorate of Horticulture, Lalbagh, Bangalore during office hours.

Application fee for each tender form is Rs. 100/- (Rupees One Hundred only). Separate Sealed tender superscribed on the cover as "TENDER FOR SUPPLY OF, VERMICOMPOST-2005-06/ TENDER FOR THE SUPPLY OF NEEM CAKE-2005-06" along with an EMD of Rs.25,000/- (Rupees Twenty five thousand only) may be sent either through post or in person so as to reach the undersigned on or before 29.04.05 at 4.00 P.M. (Separate EMD's for each item) Tender will be opened on 30.04.05 at 2.30 P.M., in the premises of the Directorate of Horticulture, Lalbagh, Bangalore.

PR-169 DIRECTOR OF HORTICULTURE.

**ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸೌಧ, ಬೆಂಗಳೂರು,**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಿಆಸುಇ 22 ಡಿಬಿಎಂ 2005 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ ಅಳವಡಿಸಿರುವ ಫಿಲಿಪ್ಸ್ ಪಬ್ಲಿಕ್ ಅಡ್ರೆಸ್ ಮೈಕ್ ಸಿಸ್ಟಂನ್ನು ದಿನಾಂಕ: 1.5.2005 ರಿಂದ 30.04.2006ರ ಒಂದು ವರ್ಷದ ಅವಧಿಗೆ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಗೆ ಒಳಪಡಿಸಲು ಉದ್ದೇಶಿಸಲಾಗಿದೆ. ಈ ಸಂಬಂಧ ಪಬ್ಲಿಕ್ ಅಡ್ರೆಸ್ ಸಿಸ್ಟಂನಲ್ಲಿ ಅನುಭವ/ ಪರಿಣತಿ ಇರುವಂತಹ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

**ಟೆಂಡರ್‌ನ ಷರತ್ತುಗಳು ಈ ಕೆಳಕಂಡಂತಿವೆ:**

1. ಮೊಹರು ಮಾಡಿರುವ ಟೆಂಡರ್‌ಗಳ ಲಕೋಟೆಯ ಮೇಲೆ "ವಿಧಾನಸೌಧದ ಸಮ್ಮೇಳನ ಸಂಭಾಗಣದಲ್ಲಿ ಫಿಲಿಪ್ಸ್ ಪಬ್ಲಿಕ್ ಅಡ್ರೆಸ್ ಮೈಕ್ ಸಿಸ್ಟಂನ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣಾ ದರಪಟ್ಟಿ" ಎಂದು ಬರೆಯತಕ್ಕದ್ದು.
2. ಟೆಂಡರ್‌ನಲ್ಲಿ ಭಾಗವಹಿಸುವವರು ರೂ. 5,000-00 (ರೂಪಾಯಿ ಐದು ಸಾವಿರಗಳು ಮಾತ್ರ) ಇ.ಎಂ.ಡಿ. ಹಣವನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ಮುಖಾಂತರ ಪಾವತಿ ಮಾಡತಕ್ಕದ್ದು.
3. ಟೆಂಡರ್‌ನ್ನು ದಿನಾಂಕ: 28.4.2005ರ ಮಧ್ಯಾಹ್ನ 3.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ಅವಧಿಯ ನಂತರ ಬಂದ ಹಾಗೂ ಇ.ಎಂ.ಡಿ. ಮೊತ್ತಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಇ.ಎಂ.ಡಿ. ಪಾವತಿ ಸಂಬಂಧ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)" ಇವರ ಹೆಸರಿನಲ್ಲಿ ಬರೆಯತಕ್ಕದ್ದು.
5. ಟೆಂಡರ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ವಿಧಾನಸೌಧ" ಇಲ್ಲಿಗೆ ಸಲ್ಲಿಸತಕ್ಕದ್ದು.

6. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ಭದ್ರತಾ ಠೇವಣಿಯಾಗಿ ಗುತ್ತಿಗೆ ಅವಧಿಯಲ್ಲಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರ ಮೇಲೆ ಯಾವುದೇ ದೂರುಗಳು ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
7. ಟೆಂಡರ್‌ನಲ್ಲಿ ಭಾಗವಹಿಸುವವರು ವಿಸ್ತಾರವಾದ ವಾರ್ಷಿಕ ನಿರ್ವಹಣೆಗೆ (ಬಿಡಿ ಭಾಗಗಳ ವೆಚ್ಚವು ಸೇರಿದಂತೆ) ದರವನ್ನು ನಮೂದಿಸತಕ್ಕದ್ದು.
8. ದೂರು ಬಂದಾಗ ಉಪಕರಣಗಳನ್ನು ಕೂಡಲೇ ದುರಸ್ಥಿಪಡಿಸುವುದಲ್ಲದೆ, ಕನಿಷ್ಠ 2 ತಿಂಗಳಿಗೊಮ್ಮೆ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (ಪ್ರಿವೆಂಟಿವ್ ಮೆಂಟೇನೆನ್ಸ್) ಮಾಡಿಸತಕ್ಕದ್ದು.
9. ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಲಾಗುವುದು.
10. ವಾರ್ಷಿಕ ಸೇವಾ ನಿರ್ವಹಣೆಯನ್ನು ತೃಪ್ತಿಕರವಾಗಿ ನಿರ್ವಹಿಸಿದ ನಂತರ ಪ್ರತಿ 6 (ಆರು) ತಿಂಗಳಿಗೊಮ್ಮೆ 2 ಕಂತುಗಳಲ್ಲಿ ವಾರ್ಷಿಕ ಸೇವಾ ವೆಚ್ಚವನ್ನು ಪಾವತಿ ಮಾಡಲಾಗುವುದು.
11. ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12. ಟೆಂಡರ್‌ನ್ನು ದಿನಾಂಕ: 28.4.2005 ರಂದು ಮಧ್ಯಾಹ್ನ 4.00 ಗಂಟೆಗೆ "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು", ಇವರ ಕಛೇರಿಯಲ್ಲಿ ತೆರೆಯಲಾಗುವುದು.
13. ಫಿಲಿಪ್ಸ್ ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ್ನು ದುರಸ್ಥಿಪಡಿಸಲು ಪರಿಣಿತಿ ಇರುವಂತಹ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
14. ಯಾವುದೇ ಕಾರಣಗಳನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

**ಹೆಚ್. ಕೆ. ರವಿಮೂರ್ತಿ**

ಪಿ.ಆರ್.170

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಕಾರ್ಯಕಾರಿ-1).

## ತೋಟಗಾರಿಕೆ ಇಲಾಖೆ

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರವರ ಕಛೇರಿ, (ರಾಜ್ಯವಲಯ) ಚಿತ್ರದುರ್ಗ

## ತೆಂಗು, ಮಾವು ಫಸಲುಗಳ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಹಿಸತೋನಿ:ರಾವ:ಚಿದು:ಸಸಂ:ಪ್ರ:1771:04-05 ದಿನಾಂಕ: 23ನೇ ಮಾರ್ಚ್ 2005**

2005ನೇ ಸಾಲಿನ ದಿನಾಂಕ: 01.01.2005 ರಿಂದ 31.12.2005 ರವರೆಗಿನ ಚಿತ್ರದುರ್ಗ ಜಿಲ್ಲೆಯ ರಾಜ್ಯ ವಲಯದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ: ನರ್ಸರಿಗಳಲ್ಲಿ ಬೆಳೆದಿರುವ ಫಸಲನ್ನು ಹರಾಜು ಅನುಮೋದಿಸಿದ ದಿನಾಂಕದಿಂದ ರೂಢಿಸಿಕೊಳ್ಳಲು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹೆಚ್ಚಿನ ವಿವರಗಳು ಮತ್ತು ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ಹಾಗೂ ಅಧೀನ ಕಛೇರಿಗಳಲ್ಲಿ ರಜಾ ದಿನಗಳನ್ನು ಬಿಟ್ಟು ಕೆಲಸದ ವೇಳೆಯಲ್ಲಿ ರೂ. 25/-ಗಳನ್ನು ಪಾವತಿ ಮಾಡಿ ನಿಗದಿತ ಫಾರಂಗಳನ್ನು ಪಡೆಯಬಹುದು. ಹರಾಜನ್ನು ಪ್ರತಿಯೊಂದು ಜಾತಿ ಫಸಲಿಗೂ ಪ್ರತ್ಯೇಕವಾಗಿ ಮಾಡಲಾಗುವುದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ ನರ್ಸರಿಗಳ ಹೆಸರು | ಫಸಲಿನ ಹೆಸರು | ಠೇವಣಿ ಮೊತ್ತ | ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ ಹಾಗೂ ವೇಳೆ | ಟೆಂಡರ್-ಕಂ-ಹರಾಜು ನಡೆಸುವ ದಿನಾಂಕ ವೇಳೆ |
|---|---|---|---|---|---|
| 1. | ಕಛೇರಿ ನರ್ಸರಿ, ಚಿತ್ರದುರ್ಗ | ತೆಂಗು | 500-00 | 12.04.05<br>ಸಂಜೆ 5.00 ಗಂಟೆ | 13.04.05<br>ಬೆಳಿಗ್ಗೆ 11.00 ಗಂಟೆ |
| 2. | ವೇದಾವತಿ ಕ್ಷೇತ್ರ ಹಿರಿಯೂರು | ತೆಂಗು | 500-00 | 13.04.05<br>ಸಂ. 5.00 ಗಂಟೆ | 15.04.05<br>ಬೆಳಿಗ್ಗೆ 11.00 ಗಂಟೆ |
| 3. | ಟಿ. ಎನ್. ಕೆರೆ ಕ್ಷೇತ್ರ ಚಿತ್ರದುರ್ಗ | ಮಾವು | 500-00 | 16.04.05<br>ಸಂಜೆ. 5.00 ಗಂಟೆ | 18.04.05<br>ಬೆಳಿಗ್ಗೆ 11.00 ಗಂಟೆ |
| 4. | ಐಯ್ಯನಹಳ್ಳಿ ತೋಟಗಾರಿಕೆ ಕ್ಷೇತ್ರ | ಮಾವು | 500-00 | 18.04.05<br>ಸಂಜೆ 5.00 ಗಂಟೆ | 19.04.05<br>ಬೆಳಿಗ್ಗೆ 11.00 ಗಂಟೆ |
| 5. | ಎನ್. ಮಹದೇವಪುರ ಕ್ಷೇತ್ರ | ತೆಂಗು<br>ಮಾವು | 500-00<br>500-00 | 19.04.05<br>ಸಂಜೆ 5.00 ಗಂಟೆ | 20.04.05<br>ಬೆಳಿಗ್ಗೆ 11.00 ಗಂಟೆ |
| 6. | ಕಛೇರಿ ನರ್ಸರಿ, ದಾವಣಗೆರೆ | ತೆಂಗು | 500-00 | 21.04.05<br>ಸಂ. 5.00 ಗಂಟೆ | 23.04.05<br>ಬೆಳಿಗ್ಗೆ 11.00 ಗಂಟೆ |
| 7. | ರಾಯಾಪುರ ತೋ. ಕ್ಷೇತ್ರ | ತೆಂಗು | 500-00 | 25.04.05<br>ಸಂಜೆ 5.00 ಗಂಟೆ | 26.04.05<br>ಬೆಳಿಗ್ಗೆ 11.00 ಗಂಟೆ |

**ವಿಶೇಷ ಸೂಚನೆ: ಠೇವಣಿ ಮೊತ್ತವನ್ನು ಕ್ರಾಸ್ ಮಾಡಿದ ಡಿ.ಡಿ. ರೂಪದಲ್ಲಿ ಮಾತ್ರ ಸ್ವೀಕರಿಸಲಾಗುವುದು.**

ಟೆಂಡರ್‌ದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಜೊತೆಯಲ್ಲಿ ತಾವು ನಮೂದಿಸುವ ಟೆಂಡರ್ ಮೊತ್ತದ ಶೇ. 50 ಭಾಗದ ಮೊತ್ತವನ್ನು ಮತ್ತು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಚಿತ್ರದುರ್ಗ ರವರ ಹೆಸರಿನಲ್ಲಿ ಪಡೆದು ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಇತ್ಯಾದಿಗಳನ್ನು ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ನಗದು ಹಣ ಸ್ವೀಕರಿಸುವುದಿಲ್ಲ. ಟೆಂಡರ್ ಹಾಗೂ ಬಿಡ್ಡಿನ ಮೊತ್ತಗಳಲ್ಲಿ ಅತಿ ಹೆಚ್ಚಿನ ಮೊತ್ತವಾದಂಥದ್ದನ್ನು ಮಾತ್ರ ಪರಿಗಣಿಸಲಾಗುವುದು. ಅತಿ ಹೆಚ್ಚಿನ ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇ. 50 ಭಾಗದ ಮೊತ್ತವನ್ನು ಅಂದೇ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್-ಕಂ-ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳ ಒಳಗೆ ಪೂರ್ಣ ಮೊತ್ತವನ್ನು ಪಾವತಿಸಿ ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖೆಯ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಆಯಾಯ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಯಶಸ್ವಿ ಬಿಡ್ಡುದಾರರು ಒಟ್ಟು ಫಸಲಿನ ಶೇ. 5 ರಷ್ಟು ಭಾಗವನ್ನು ಇಲಾಖೆ ನಿಗದಿಪಡಿಸಿದ ದರದಲ್ಲಿ ಮಾರಾಟ ಮಾಡಲು ಸಿದ್ಧರಿರಬೇಕು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,

ಪಿ.ಆರ್.171 (ರಾಜ್ಯವಲಯ) ಚಿತ್ರದುರ್ಗ.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ: 2004-05

ಮೊಹರಾದ ಐಟಂವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೊಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 19.5.05 ಸಂಜೆ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 16.5.04 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: :- 18.5.2005.
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: :- 19.5.2005.
4. ಕೆಲಸವನ್ನು ಮುಗಿಸುವ ಅವಧಿ :- ಎರಡು ತಿಂಗಳು
5. ಟೆಂಡರ್ ಕರೆ :- ಒಂದನೇ ಕರೆ

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| 1. | ಶಿಕಾರಿಪುರದಿಂದ ಚನ್ನಹಳ್ಳಿಗೆ ಹೋಗುವ ಐ.ಟಿ. ರಸ್ತೆಯಲ್ಲಿ ಬರುವ ಕಾಸುವೇ ಸರ್ಕಲ್‌ನಿಂದ ಕುಮದ್ವತಿ ನದಿಗೆ ಹೋಗುವ ಕಿ.ಮೀ. 2.25 ರಿಂದ ಕಿ.ಮೀ. 4.10 ರವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | ರೂ. 7,98,093/- | ರೂ. 15,965/- | ರೂ. 1000/- | ಮೂರನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆಗಳು:**

1. ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2. ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್ ಡಿಮ್ಯಾಂಡ್ ಡ್ರಾಫ್ಟ್ ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ. 4. ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4. ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿ ಪೀರಿಯಡ್) ತೊಂಭತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5. ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6. ಟೆಂಡರ್‌ನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ ಸ್ವೀಕರಿಸುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.

7. ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8. ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
9. ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

ಕಾರ್ಯಪಾಲಕ ಅಭಿಯಂತರು,

ಪಿ.ಆರ್.173 ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ಅಂಚೆಚೀಲ-5313,
## ಬಹುಮಹಡಿ ಕಟ್ಟಡ, 2ನೇ ಹಂತ, 2ನೇ ಮಹಡಿ, ಬೆಂಗಳೂರು
## ಅಧಿಸೂಚನೆ ಸಂ: ಸಿ1:ಸಿಆರ್-32/2004-05 ದಿನಾಂಕ: 18ನೇ ಮಾರ್ಚ್ 2005

**ವಿಷಯ :** ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿನ ಪರಿಶಿಷ್ಠ ಜಾತಿಯ ಬ್ಯಾಕ್‌ಲಾಗ್ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಸಂಬಂಧದಲ್ಲಿ ಅಂತಿಮ ಆಯ್ಕೆ ಪಟ್ಟಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** ಈ ನ್ಯಾಯಾಧಿಕರಣದ ಇದೇ ಸಮಸಂಖ್ಯೆಯ ದಿನಾಂಕ: 21.07.2004ರ ಅಧಿಸೂಚನೆ.

ಈ ನ್ಯಾಯಾಧಿಕರಣದ ಉಲ್ಲೇಖಿತ ಅಧಿಸೂಚನೆ ಮೇರೆಗೆ ಪರಿಶಿಷ್ಠ ಜಾತಿಯ ಒಂದು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಸ್ವೀಕೃತವಾದ ಅರ್ಜಿಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿಶಿಷ್ಠ ಜಾತಿ) ಮತ್ತು ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಿಟ್ಟು ಭರ್ತಿಯಾಗದ ರಿಕ್ತ ಸ್ಥಾನಗಳು (ವಿಶೇಷ ನೇಮಕಾತಿ) ನಿಯಮಗಳು 2001ರ ಮೇರೆಗೆ ಕೆಳಕಂಡಂತೆ ವಿಂಗಡಿಸಿ ಪರಿಶೀಲಿಸಿದೆ.

1) 29 ವರ್ಷಗಳು ತುಂಬಿದ್ದು 40 ವರ್ಷಗಳು ತುಂಬಿಲ್ಲದ ಅರ್ಹ ಅರ್ಜಿಗಳು.
2) 29 ವರ್ಷಗಳು ತುಂಬಿದ್ದು 40 ವರ್ಷಗಳು ತುಂಬಿಲ್ಲದ ಹಾಗೂ ಪದವಿಯ ಅಂಕಪಟ್ಟಿಗಳನ್ನು ಲಗತ್ತಿಸದ ಅರ್ಜಿಗಳು
3) 18 ವರ್ಷದಿಂದ 29 ವರ್ಷಗಳು ತುಂಬಿಲ್ಲದ ಅರ್ಜಿಗಳು
4) ಪದವಿ ವಿದ್ಯಾರ್ಹತೆಯನ್ನು ಹೊಂದದೆ ಇರುವ ಅರ್ಜಿಗಳು.
5) ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕವಾದ 21.9.2004ರ ತಡವಾಗಿ ಸ್ವೀಕೃತವಾದ ಅರ್ಜಿಗಳು.
6) ಪರಿಶಿಷ್ಠ ಜಾತಿ ಅಲ್ಲದವರು ಸಲ್ಲಿಸಿರುವ ಅರ್ಜಿಗಳು
7) ವಯಸ್ಸು ಮೀರಿದ ಅಭ್ಯರ್ಥಿಗಳ ಅರ್ಜಿಗಳು.

ವಿದ್ಯಾರ್ಹತೆಯ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಬಗ್ಗೆ ಅಂಕಪಟ್ಟಿಯನ್ನು ಲಗತ್ತಿಸದ, ಪದವಿ ವಿದ್ಯಾರ್ಹತೆಯನ್ನು ಹೊಂದಿಲ್ಲದ, ಪರಿಶಿಷ್ಠ ಜಾತಿ ಅಲ್ಲದವರು ಸಲ್ಲಿಸಿರುವ, ಅರ್ಜಿಗಳು ಸ್ವೀಕರಿಸಲು ಕಡೆಯ ದಿನಾಂಕ: 21.9.2004ರ ನಂತರ ತಡವಾಗಿ ಸ್ವೀಕೃತವಾದ ವಯಸ್ಸು ಮೀರಿದ ಹಾಗೂ 29 ವರ್ಷ ತುಂಬಿ 40 ವರ್ಷದೊಳಗಿನ ಅಭ್ಯರ್ಥಿಗಳು ಲಭ್ಯವಿರುವ ಕಾರಣ, 18 ವರ್ಷದಿಂದ 29 ವರ್ಷ ತುಂಬಿರದ ಅಭ್ಯರ್ಥಿಗಳ ಅರ್ಜಿಗಳನ್ನು ಪರಿಗಣಿಸದೆ, ಸಕಾಲದಲ್ಲಿ ಸ್ವೀಕೃತವಾದ ಅರ್ಜಿಗಳಲ್ಲಿ 29 ವರ್ಷ ತುಂಬಿದ್ದು 40 ವರ್ಷದೊಳಗಿನ ಮೀಸಲಾತಿ ವರ್ಗೀಕರಣದಂತೆ ಕೆಳಕಂಡ ಪರಿಶಿಷ್ಠ ಜಾತಿಯ ಸಾಮಾನ್ಯ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗಿದೆ.

| ಪ್ರಥಮ ದರ್ಜೆ ಸಹಾಯಕರು | - 01 | (ಬ್ಯಾಕ್‌ಲಾಗ್) |
|---|---|---|
| ಪರಿಶಿಷ್ಠ ಜಾತಿ (ಸಾಮಾನ್ಯ) | ಹುಟ್ಟಿದ ತಾರೀಖು | ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡಾ |
| ಬಾಬು ಪಿ. ನಂ.102, ಯು.ಎ.ಎಸ್. ಲೇಔಟ್, ಅಲ್ಲಾಳಸಂದ್ರ ಹತ್ತಿರ ಜಿ.ಕೆ.ವಿ.ಕೆ. ಪೋಸ್ಟ್ ಬೆಂಗಳೂರು-560 065 | 26.03.1974 | 81.5% |

ನೇಮಕಾತಿಯ ಅಭ್ಯರ್ಥಿಯು ಎಲ್ಲಾ ವಿಧದಲ್ಲೂ ಅರ್ಹರಾಗುವ ಬಗ್ಗೆ ವಿಚಾರಣೆಗೆ ಒಳಪಡುತ್ತಾರೆ. ಈ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಯ ನೇಮಕಾತಿಗೆ ಯಾವುದೇ ಹಕ್ಕನ್ನು ಹೊಂದಿರುವುದಿಲ್ಲ.

ನಿಬಂಧಕರು

ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು.

### ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿ
### ಪ್ರಥಮ ದರ್ಜೆ ಸಹಾಯಕರ ಹುದ್ದೆ-1 ಬ್ಯಾಕ್‌ಲಾಗ್ ಹುದ್ದೆ

| ಕ್ರಮ ಸಂಖ್ಯೆ | ಪರಿಶಿಷ್ಠ ಜಾತಿ (ಸಾಮಾನ್ಯ) | ಹುಟ್ಟಿದ ತಾರೀಖು | ಪದವಿಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ |
|---|---|---|---|
| 1. | ಶ್ರೀ ಸುರೇಶ್ ಕೆ. ಎನ್. ಬಿನ್ ಕೆ. ನಂಜಯ್ಯ 19/33 ಮುಸ್ಲಿಂ ಬ್ಲಾಕ್ ಕೃಷ್ಣರಾಜ ನಗರ | 09.07.1974 | 77.7% |

ನೇಮಕಾತಿಯಂತೆ ಈ ಅಭ್ಯರ್ಥಿಯು ಎಲ್ಲಾ ವಿಧದಲ್ಲೂ ಅರ್ಹರಾಗುವ ಬಗ್ಗೆ ವಿಚಾರಣೆಗೆ ಒಳಪಡುತ್ತಾರೆ. ಈ ಹೆಚ್ಚುವರಿ ಆಯ್ಕೆಯಲ್ಲಿನ ಅಭ್ಯರ್ಥಿಯು ನೇಮಕಾತಿಗೆ ಯಾವುದೇ ಹಕ್ಕನ್ನು ಹೊಂದಿರುವುದಿಲ್ಲ.

ನಿಬಂಧಕರು

ಪಿ.ಆರ್.174 ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಪ್ರಾದೇಶಿಕ ವಿಭಾಗ, ದಾವಣಗೆರೆ
## ಸವಿಸ್ತಾರ ಟೆಂಡರ್ ಪ್ರಕಟಣೆ
## ಸಂ: ಬಿ1:ಅಪ್ರಾಸಂ:ಉಪಹಾರಗೃಹ:ಸಿಆರ್-105/2004-05 ದಿನಾಂಕ: 7ನೇ ಮಾರ್ಚ್ 2005

**ವಿಷಯ :** 2005-07ರ ಅವಧಿಗೆ ಆನಗೋಡು ಇಂದಿರಾ ಪ್ರಿಯದರ್ಶಿನಿ ಪ್ರಾಣಿ ಸಂಗ್ರಹಾಲಯದಲ್ಲಿ ಉಪಹಾರ ಗೃಹ ನಡೆಸುವ ಬಗ್ಗೆ.

ದಾವಣಗೆರೆ ವಿಭಾಗದ ವ್ಯಾಪ್ತಿಯಲ್ಲಿರುವ ಇಂದಿರಾ ಪ್ರಿಯದರ್ಶಿನಿ ಪ್ರಾಣಿ ಸಂಗ್ರಹಾಲಯ, ಆನಗೋಡು ಇಲ್ಲಿ 2005-07ನೇ ಸಾಲಿಗೆ ಸಸ್ಯಹಾರಿ ಉಪಹಾರ ಗೃಹ ನಡೆಸಲು ಪ್ರಸಕ್ತ ಸಾಲಿನ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಹಾಗೂ ನುರಿತ ಹೋಟೆಲ್ ಉದ್ಯಮಿಗಳಿಂದ ಟೆಂಡರ್‌ಗಳನ್ನು ದಿನಾಂಕ: 23.04.2005 ರಂದು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಸದರಿ ದಿನದಂದು ಅಪರಾಹ್ನ 4.30 ಗಂಟೆಯವರೆಗೆ ಸ್ವೀಕರಿಸಿ ಅದೇ ದಿವಸ ಸಾಯಂಕಾಲ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರ್ ನಮೂನೆ ಜೊತೆ ಮುಂಗಡ ಠೇವಣಿಯಾಗಿ ರೂ. 2000/- ಗಳಿಗೆ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಲಗತ್ತಿಸಿರಬೇಕು. ತಪ್ಪಿತಸ್ಥ ಮತ್ತು ಕಪ್ಪುಪಟ್ಟಿಯಲ್ಲಿರುವ ಗುತ್ತಿಗೆದಾರರು ಭಾಗವಹಿಸುವಂತಿಲ್ಲ.

### ಷರತ್ತುಗಳು:

1. ದಿನಾಂಕ: 23.04.2005ರ ಮಧ್ಯಾಹ್ನ 1.00 ಗಂಟೆಯ ತನಕ ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ವಿತರಿಸಲಾಗುವುದು. ಪ್ರತಿ ಟೆಂಡರ್ ಫಾರಂ ಬಾಬ್ತು ಶುಲ್ಕ ರೂ.200/- ಗಳನ್ನು ಮತ್ತು ಇತರೆ ತೆರಿಗೆಯನ್ನು ಸಲ್ಲಿಸಿ ಪಡೆಯಬಹುದು.
2. ಟೆಂಡರ್ ಪ್ರಕಟಣೆಯಲ್ಲಿ ಸೂಚಿಸಿದಂತೆ ಟೆಂಡರ್‌ನಲ್ಲಿ ಭಾಗವಹಿಸುವವರು ರೂ.2000/- ಗಳ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್‌ಗಳನ್ನು ಇ.ಎಂ.ಡಿ.ಯಾಗಿ ಸಲ್ಲಿಸಬೇಕು.
3. ಅದೇ ದಿನ 4.30 ಗಂಟೆಗೆ ಸರಿಯಾಗಿ ಟೆಂಡರ್ ಪೆಟ್ಟಿಗೆಯನ್ನು ಮುಚ್ಚಿ ಸೀಲ್ ಮಾಡಲಾಗುವುದು. ಅದೇ ದಿವಸದಂದು 5.00 ಗಂಟೆಗೆ ಹಾಜರಿರುವ ಬಿಡ್ಡುದಾರರ ಸಮಕ್ಷಮ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡ ಅಧಿಕಾರಿಗಳು ತೆರೆಯುವರು.
4. ಗುತ್ತಿಗೆ ಅವಧಿ ದಿನಾಂಕ: 30.04.2007 ರವರೆಗೆ ಇರುತ್ತದೆ.
5. ಹೆಚ್ಚಿನ ವಿವರಗಳಿಗೆ ಈ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್.175 ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ
## ಸಂ: ಬಿ1:ಮೈಅಸ:ಟೆಂ:ಸಿಆರ್-104/2004-05 ದಿನಾಂಕ: 7ನೇ ಮಾರ್ಚ್ 2005

ದಾವಣಗೆರೆ ವಿಭಾಗದ ವ್ಯಾಪ್ತಿಯಲ್ಲಿರುವ ಇಂದಿರಾ ಪ್ರಿಯದರ್ಶಿನಿ ಕಿರು ಮೃಗಾಲಯ, ಆನಗೋಡು ಇಲ್ಲಿನ ಪ್ರಾಣಿ-ಪಕ್ಷಿಗಳಿಗೆ 2005-06ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ಪ್ರತಿ ದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸಲು ಈ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಲಕೋಟೆಗಳಲ್ಲಿ ಟೆಂಡರ್‌ಗಳನ್ನು ದಿನಾಂಕ: 21.04.2005 ರಂದು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಸದರಿ ದಿನದಂದು ಅಪರಾಹ್ನ 4.30 ಗಂಟೆಯವರೆಗೆ ಸ್ವೀಕರಿಸಿ, ಅದೇ ದಿನ ಸಾಯಂಕಾಲ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರಿನ ಜೊತೆ ಮುಂಗಡ ಠೇವಣಿ ಬಾಬ್ತು ರೂ.2000/- ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಲಗತ್ತಿಸಿರಬೇಕು. ತಪ್ಪಿತಸ್ಥ ಮತ್ತು ಕಪ್ಪು ಪಟ್ಟಿಯಲ್ಲಿರುವ ಗುತ್ತಿಗೆದಾರರು ಭಾಗವಹಿಸುವಂತಿಲ್ಲ.

| ಕ್ರ.ಸಂ. | ಮೃಗಾಲಯದ ಹೆಸರು ಮತ್ತು ಸ್ಥಳ | ಪ್ರತಿ ತಿಂಗಳಿಗೆ ಸರಬರಾಜು ಮಾಡಬೇಕಾದ ಆಹಾರ (ಕೆ.ಜಿ.ಗಳಲ್ಲಿ) | | | |
|---|---|---|---|---|---|
| 1 | ಇಂದಿರಾ ಪ್ರಿಯದರ್ಶಿನಿ ಕಿರು | 1) | ಹುರುಳಿ ನುಚ್ಚು -541.41 | 2) | ಕಡ್ಲೆಬೂಸ -541.41 |
| | ಮೃಗಾಲಯ, ಆನಗೋಡು | 3) | ಸೂರ್ಯಕಾಂತಿ ಹಿಂಡಿ-541.41 | 4) | ಅಕ್ಕಿ-52.160 |
| | | 5) | ಭತ್ತ-52.160 | 6) | ಜೋಳ-52.160 |
| | | 7) | ರಾಗಿ-52.160 | 8) | ಹಾಲು-182.50 ಲೀ |
| | | 9) | ಹಸಿರು ಹುಲ್ಲು-6995.83 (ಅಗತ್ಯನುಸಾರ) | 10) | ಹುರಿಗಡಲೆ-9.880 |
| | | 11) | ಹೆಸರುಕಾಳು-9.880 | 12) | ಕಡ್ಲೆಕಾಳು-9.880 |
| | | 13) | ತರಕಾರಿಗಳು-288.95 | 14) | ಉಪ್ಪು-13.38 |

### ನಿಬಂಧನೆಗಳು:

1. ದಿನಾಂಕ: 21.04.2005ರ ಮಧ್ಯಾಹ್ನ 1.00 ಗಂಟೆಯ ತನಕ ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ವಿತರಿಸಲಾಗುವುದು. ಪ್ರತಿ ಟೆಂಡರ್ ಫಾರಂ ಬಾಬ್ತು ಶುಲ್ಕ ರೂ.200/- ಗಳನ್ನು ಮತ್ತು ಚಾಲ್ತಿಯಲ್ಲಿರುವ ಇತರೆ ತೆರಿಗೆಯನ್ನು ಸಲ್ಲಿಸಿ ಪಡೆಯಬಹುದು.
2. ಟೆಂಡರ್ ಪ್ರಕಟಣೆಯಲ್ಲಿ ಸೂಚಿಸಿದಂತೆ ಟೆಂಡರ್‌ನಲ್ಲಿ ಭಾಗವಹಿಸುವವರು ರೂ.2000/- ಗಳ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್‌ಗಳನ್ನು ಇ.ಎಂ.ಡಿ. ಯಾಗಿ ಸಲ್ಲಿಸಬೇಕು.
3. ಅದೇ ದಿನ 4.30 ಗಂಟೆಗೆ ಸರಿಯಾಗಿ ಟೆಂಡರ್ ಪೆಟ್ಟಿಗೆಯನ್ನು ಮುಚ್ಚಿ ಸೀಲ್ ಮಾಡಲಾಗುವುದು. ಅದೇ ದಿವಸದಂದು 5.00 ಗಂಟೆಗೆ ಹಾಜರಿರುವ ಬಿಡ್ಡುದಾರರ ಸಮಕ್ಷಮ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡ ಅಧಿಕಾರಿಗಳು ತೆರೆಯುವರು.
4. ಗುತ್ತಿಗೆ ಅವಧಿ ದಿನಾಂಕ: 31.03.2006 ರವರೆಗೆ ಇರುತ್ತದೆ.
5. ಹೆಚ್ಚಿನ ವಿವರಗಳಿಗೆ ಈ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್.176 ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.